ಈಗ ವ್ಯಾಕರಣ ವಿಷಯಕ್ಕೆ ಸಂಬಂಧಿಸಿ, ಎಂದರೆ ಕೆಲವು ಸಂಸ್ಕೃತ ವ್ಯಂಜನಾಂತ ಶಬ್ದಗಳು ಸಮಸಂಸ್ಕೃತರೂಪಗಳಾಗುವ ರೀತಿಗೆ ಸಂಬಂಧಿಸಿ ಪದ್ಯದ ಆಶಯ ಹೀಗೆ: ವಿಕಲ್ಪವಾಗಿ ಅಸ್ವರ ಪ್ರಕೃತಿಗಳು ಅಕಾರಾಂತಗೊಳ್ಳುವುದು: ಉದಾ. ವಯಸ್ – ವಯಸ, ಅದರ್ಶನವನ್ನು ಪಡೆಯುವುದು: ವಯಸ್ – ವಯ. ಎರಡು ಕಿವಿಗಳ ಹಾಗೆ (ಶ್ರುತಿವೋಲ್) ದ್ವಿತ್ವ ಹೊಂದುವುದು : ದಿಕ್ – ದಿಕ್ಕು.

೧೮. ಸಂಖ್ಯಾವಾಚಿಗಳಾದ ಒಂದು, ಎರಡು ಶಬ್ದಗಳು ಸಮಾಸ ವಿಧಿಯಲ್ಲಿ ತಳೆಯುವ ವ್ಯತ್ಯಾಸಗಳನ್ನು ಹೇಳುವಾಗ ಖಳರ ಸಹವಾಸದ ಒಂದು ಹೋಲಿಕೆಯನ್ನು ತರುವುದು (ಸೂತ್ರ ೫೭–ಪದ್ಯ ೨೫೯):

ಓರೆಂಜಲೊರ್ಪಂತಿಗೆ<br>ವಾರದ ಖಳರೊಡನೆ ಬೆರಸಿ ಮೇಳಂಗೊಂಡಂ<br>ದಾರುಂ ಲಘುವಪ್ಪರ್ ಪ್ರ<br>ಸ್ತಾರದೊಳಮರ್ದೆಂಬ ಶಿಥಿಲ ಸಂಯೋಗದವೊಲ್ ॥

ಈ ಕಂದಪದ್ಯದ ಕವಿ ಯಾರೋ, ಆಕರ ಯಾವುದೋ ತಿಳಿಯದು. ಒಂದು ಎಂಬ ಸಂಖ್ಯಾವಾಚಿಗೆ ಕಡೆಯಲ್ಲಿ ರೇಫಾದೇಶವಾಗಿ ಒರ್ ಓರ್ ಎಂದಾಗುವುದು ಎಂಬುದಾಗಿ ಹೇಳುವಾಗ, ಕೊಟ್ಟ ಪ್ರಯೋಗವಿದು.

"ಒಂದು ತಣಿಗೆಯಲ್ಲಿ ಉಣ್ಣಲಾಗಲಿ (=ಓರೆಂಜಲ್ಗೆ), ಒಟ್ಟಿಗೆ ಕೂತು ಉಣ್ಣಲಾಗಲಿ (=ಒರ್ಪಂತಿಗೆ) ಯೋಗ್ಯರಲ್ಲದ ದುಷ್ಟರೊಡನೆ ಸೇರಿ ಸ್ನೇಹ ಬೆಳೆಸಿದಾಗ, ಯಾರೇ ಆಗಲಿ, ಪದ್ಯಗಳ ಪ್ರಸ್ತಾರದಲ್ಲಿ 'ಅಮರ್ದು' ಎಂಬ ಶಿಥಿಲ ದ್ವಿತ್ವವುಳ್ಳ ಪದದ ಹಾಗೆ ತಾವೂ ಲಘುವಾಗುತ್ತಾರೆ. ಎಂದರೆ ಅಲ್ಪರಾಗುತ್ತಾರೆ" –ಇದು ಪದ್ಯದ ಆಶಯ.

'ಶಬ್ದಮಣಿದರ್ಪಣ'ದ ಪರಿಚಯವರಿವವರಿಗೆ ಈ ಉಪಮೆಯ ಅರ್ಥ ಸುಲಭವಾಗಿ ಹೊಳೆಯುತ್ತದೆ. 'ಅಮರ್ದು' ಸಹಜ ಶಿಥಿಲವೃತ್ತಿಯ ಶಬ್ದಗಳಲ್ಲಿ ಒಂದು (ಸೂತ್ರ ೫೫). ಇಲ್ಲಿಯ 'ರ್ದು' ಶಿಥಿಲ ದ್ವಿತ್ವವಾಗಿ ಉಚ್ಚಾರವಾಗುವುದರಿಂದ 'ಮ' ಸಂಯುಕ್ತಾಕ್ಷರದ ಹಿಂದಿನ ಅಕ್ಷರ ಗುರುವಾಗಬೇಕೆಂಬ ಸಾಮಾನ್ಯ ನಿಯಮಕ್ಕೆ ಸಿಕ್ಕದೆ ಲಘುವಾಗಿಯೇ ಉಳಿಯುತ್ತದೆ. ನ್ಯಾಯವಾಗಿ ಗುರುವಾಗಬೇಕಾಗಿದ್ದ ಸಂಯುಕ್ತಾಕ್ಷರದ ಹಿಂದಿನ ಅಕ್ಷರ, ಸಂಯುಕ್ತಾಕ್ಷರದ ಶೈಥಿಲಲಕ್ಷಣದ ಕಾರಣ ಗುರುವಾಗದೆ ಉಳಿಯಬೇಕಾಯಿತಷ್ಟೇ : ಹಾಗೆಯೇ ಅನೇಕ ದೋಷ ದೌರ್ಬಲ್ಯಗಳಿಂದ ಕೂಡಿದ ಖಳರ ಸ್ವಭಾವ ಸಂಪರ್ಕ ಸಂಸರ್ಗಗಳ ಕಾರಣವಾಗಿ ಎಂಥವರೂ, ಸಜ್ಜನರೇ ಆದವರೂ, ತಮ್ಮ ಗುರುತ್ವವನ್ನು ಎಂದರೆ ಹಿರಿಮೆ ಗರಿಮೆಗಳನ್ನು ಕಳೆದುಕೊಂಡು ತಾವೂ ಆ ಖಳರ ಹಾಗೆ ಅಲ್ಪರಾಗಿಬಿಡುತ್ತಾರೆ ಎಂಬುದು ಒಟ್ಟಿನಲ್ಲಿ ಪದ್ಯದ ಅಂತರಾರ್ಥ. ಆದರೆ ಈ ಉಪಮೆಯ ಸ್ವಾರಸ್ಯ ಇಷ್ಟರಲ್ಲೇ ಮುಗಿಯದೆ ಆಲೋಚಿಸಿದ ಹಾಗೆಲ್ಲ ಅರ್ಥವ್ಯಾಪ್ತಿ ಬೆಳೆಯುವಂತೆ ತೋರುತ್ತದೆ. ಶೈಥಿಲ್ಯ ಲಕ್ಷಣವಿಲ್ಲದ ಸಂಯುಕ್ತಾಕ್ಷರದ ಹಿಂದಿನ ಲಘುಕರ ಗುರುವಾಗುವುದು

ಸಹಜವಷ್ಟೇ. ಹಾಗೆಯೇ ಅಂಥ ಸಹಜ ಸಂಯುಕ್ತಾಕ್ಷರಕ್ಕೆ ಸದೃಶರಾದ ಸಜ್ಜನರ ಸಂಪರ್ಕದಿಂದ ಸಾಮಾನ್ಯರೂ ಅಲ್ಪರೂ ಗುರುತ್ವವನ್ನು, ಎಂದರೆ ಹಿರಿಮೆ ಗರಿಮೆಗಳನ್ನು ಪಡೆಯುವುದು ಸಾಧ್ಯ. ಮೊದಲೇ ಗುರುತ್ವವುಳ್ಳವರಾಗಿದ್ದ ಪಕ್ಷದಲ್ಲಿ ಯಾವ ಭಂಗವೂ ಕೊರತೆಯೂ ಇಲ್ಲದಂತೆ ಅವರು ಸುಸ್ಥಿರವಾಗಿ ಇದ್ದುಕೊಳ್ಳುವುದು ಸರಿಯೇ ಸರಿ. ಹೀಗೆ ಅರ್ಥ ಕಲ್ಪನೆ ಬೆಳೆಯುವುದಕ್ಕೆ ಅವಕಾಶವಿರುವ ಈ ಪದ್ಯ ಪ್ರತಿಭೆ ಪಾಂಡಿತ್ಯಗಳ ಒಂದು ಸಮರಸ ಸೃಷ್ಟಿ.

೧೯. ಅಗ್ಗಳನ **ಚಂದ್ರಪ್ರಭ ಪುರಾಣ** (೧೧೮೯): ಮದುವೆ ಮನೆಯೊಂದರ ವರ್ಣನೆಯನ್ನು ಚಮತ್ಕಾರಿಕವಾಗಿ ವರ್ಣಿಸುವ ಗದ್ಯ ಭಾಗದಲ್ಲಿ

ಸುಕರ ಕವಿವಾಕ್ಯದಂತೆ ಸುವರ್ಣ ಘಟನಾಭಿತ್ತಿ ವಿಸ್ತಾರಮುಂ (೧೩–೩೬ ವ.)

ಎಂಬ ವಾಕ್ಯಾಂಶವಿದೆ. ಮದುವೆ ಮನೆ ಒಳ್ಳೆಯ ರೂಪ ಅಥವಾ ಬಣ್ಣದಿಂದ ಕೂಡಿದ ಗೋಡೆಗಳಿಂದ ವಿಶಾಲವಾಗಿದೆ ಎಂದು ಹೇಳುವುದು ಇಲ್ಲಿ ಉದ್ದೇಶ. ಆದರೆ ಲಲಿತವಾಗಿ ಕೃತಿರಚನೆ ಮಾಡುವ ಕವಿಯ ವಾಕ್ಯದ ಹಾಗೆ ಎನ್ನುವುದಕ್ಕೆ ಅದು ಹೊಂದುವುದಿಲ್ಲ. ಒಳ್ಳೆಯ ಕವಿವಾಕ್ಯದಲ್ಲಿ ಒಳ್ಳೆಯ ಅಕ್ಷರಗಳ ಸಂಘಟನೆಯಿರುವ ಕಥಾಭಿತ್ತಿಯೋ ವಸ್ತುವಿಸ್ತಾರವೋ ಇರಬಹುದು. ಕವಿವಾಕ್ಯ – ವರ್ಣ ಸಂಘಟನೆಗಳು ಇಲ್ಲಿ ಪ್ರಸ್ತುವಲ್ಲವಾದ್ದರಿಂದ ಮದುವೆ ಮನೆಗೆ ಬಣ್ಣದ ಗೋಡೆಯೆಂಬ ಅರ್ಥವನ್ನು ಹೇಳಿ ವಿರೋಧಾಭಾಸವನ್ನು ನಿವಾರಿಸಬಹುದು.

೨೦. ವಿವಾಹವಾದ ದಂಪತಿಯ ವಿಚಾರ ಈ ಮುಂದಿನ ಕಂದಪದ್ಯದಲ್ಲಿ ಬಂದಿದೆ:

ನಿರುತಂ ಪ್ರಕೃತಿ ಪ್ರತ್ಯಯ
ಮೆರಡುಂ ಕೂಡಿಯೆ ಕೃತಾರ್ಥವೃತ್ತಿಯನಾಂತಂ
ತಿಱೆ ಮದುವೆ ನೆರೆದು ವನಿತಾ
ವರರಿರ್ವರುಮಾಂತರಂದು ಚರಿತಾರ್ಥತೆಯಂ ॥ (೩–೪೩)

ಪ್ರಕೃತಿ ಪ್ರತ್ಯಯಗಳೆರಡೂ ಸದಾ ಕೂಡಿಯೇ ಅರ್ಥವನ್ನು ಕೊಡುವ ಹಾಗೆಯೇ ವಧೂವರರು ಮದುವೆಯಾಗಿ ಚರಿತಾರ್ಥರಾದರು ಎಂಬುದಾಗಿ ಇಲ್ಲಿ ಔಪಮ್ಯ ಮೂಲವಾಗಿ ಹೇಳಿದೆ. ಇಲ್ಲಿ ಅರ್ಥವೃತ್ತಿ ಎಂದಿರುವ ಮಾತು ಶಬ್ದಮಣಿ ದರ್ಪಣದ ಪೀಠಿಕೆಯಲ್ಲಿ ಬರುವ 'ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದೆಂ' ಎಂಬ ಮಾತನ್ನು ನೆನಪಿಗೆ ತರುತ್ತದೆ (ಅರ್ಥವೃತ್ತಿ = ಅರ್ಥದ ವಿವರಣೆ).

ಈ ಕಂದಪದ್ಯ ಕಾಳಿದಾಸನ ೧೧–೫೬ರ 'ತಾ ನರಾಧಿಪಸುತಾ' ಎಂಬ ಆರಂಭದ, ಈಗಾಗಲೇ ನೋಡಿರುವ, ರಥೋದ್ಧತಾವೃತ್ತವನ್ನು ನೆನಪಿಗೆ ತರುತ್ತದೆ. "ಸೋಽಭವದ್ವರವಧೂ ಸಮಾಗಮಃ । ಪ್ರತ್ಯಯ ಪ್ರಕೃತಿಯೋಗ ಸನ್ನಿಭಃ" ಎಂಬುದು ಅಲ್ಲಿಯ ವಾಕ್ಯ.

೨೧. ಇದೇ ಕಾವ್ಯದ ಇನ್ನೊಂದು ಚಮತ್ಕಾರ ಪದ್ಯ :

ಪರಿಜನ ಫಳವತ್ ಕ್ಷೇತ್ರೋ
ತ್ಕರ ಬಂಧು ಸಮೂಹ ಭವನ ಮಹಿಳಾವಳಿಯಿಂ
ಬುರುತರ ಪವರ್ಗಚಿಂತಾ
ಪರಿಗತನಪವರ್ಗ ಚಿಂತೆಯಂ ಮಾಡುಗುಮೇ ॥ (೧೩-೮೨)

ಪವರ್ಗದ ಪರಿಜನ ಫಳವತ್ ಕ್ಷೇತ್ರ ಮೊದಲಾದವುಗಳ ಚಿಂತೆಯಿಂದ ಕೂಡಿದವನು ಅಪವರ್ಗದ ಮೋಕ್ಷದ ಚಿಂತೆಯನ್ನು ಮಾಡುವನೇ ? ಇಲ್ಲಿ ಪವರ್ಗಚಿಂತೆ ಅಪವರ್ಗಚಿಂತೆ ಎಂದಿರುವ ಎರಡು ಮಾತುಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಪವರ್ಗ ಎಂದರೆ, ಪರಿಜನ, ಫಳವತ್ ಕ್ಷೇತ್ರೋತ್ಕರ, ಬಂಧು ಸಮೂಹ, ಭವನ ಮತ್ತು ಮಹಿಳಾವಳಿ ಎಂಬ ಪದಗಳ ಆರಂಭದಲ್ಲಿ ನಿಹಿತವಾಗಿರುವ ವರ್ಣಗಳು ಪವರ್ಗಕ್ಕೆ ಸೇರಿದ ಪ ಫ ಬ ಭ ಮ ಎಂಬ ವರ್ಣಗಳು; ಅಪವರ್ಗ ಎಂಬ ಪದ ಪವರ್ಗವಲ್ಲದ್ದು ಎಂದೂ ಮೋಕ್ಷ ಎಂದೂ ಅರ್ಥ ಕೊಡುವ ಶಬ್ದ. ಹೆಣ್ಣು ಹೊನ್ನು ಮಣ್ಣುಗಳ ಮೋಹವುಳ್ಳವನು ಮುಕ್ತಿಯ ಬಗ್ಗೆ ಯೋಚಿಸಲಾರನಷ್ಟೆ?

೨೨. ಇದೇ ಕಾವ್ಯದ ಮತ್ತೊಂದು ಚಮತ್ಕಾರ, ಇನ್ನೂ ಗೂಢವಾಗಿ ಸ್ವಾರಸ್ಯಕರವಾಗಿದೆ. ಸ್ಥಳವೊಂದರ ನೀರು ತುಂಬಿದ ಅಗತೆಯ ವರ್ಣನೆಯನ್ನು ಹೇಳುವ ಗದ್ಯಭಾಗದ ಒಂದು ವಾಕ್ಯಾಂಶವಿದು:

ಮತ್ತಮಾ ಮಹಾಪರಿಖೆ ಶಬ್ದಶಾಸ್ತ್ರಪದ್ಧತಿಯಂತೆ ತುಹಿನನಿಪಾತ ಸಮುಪೇತೆಯುಂ...
(೧೫-೨೯ ವ.)

ಅಗತೆಗೂ ವ್ಯಾಕರಣಕ್ಕೂ ಏನು ಸಂಬಂಧ? ಅಗತೆ ವಿಶಾಲವಾದ್ದು, ಸರಿ. ಅದರಲ್ಲಿ ಹಿಮ ಅಥವಾ ಮಂಜು ಬಿದ್ದು ಅದರಿಂದ ತುಂಬಿರುವ ಅಗತೆಯದು; ತುಹಿನನಿಪಾತ ಎಂದರೆ ಮಂಜು ಬೀಳುವಿಕೆ. ವ್ಯಾಕರಣಕ್ಕೆ ಹೇಗೆ ಸಂಬಂಧ. ತು, ಹಿ, ನ ಎಂಬ ನಿಪಾತಾವ್ಯಯಗಳಿಂದ ಕೂಡಿದೆಯೆಂದರ್ಥ. ಈ ಅವ್ಯಯಗಳ ಅರ್ಥವನ್ನು ಗ್ರಹಿಸಿದಾಗ ಉಂಟಾಗುವ ವಿರೋಧಾಭಾಸ, ಹಿಮ ಮಂಜು ಎಂದು ಗ್ರಹಿಸಿದಾಗ ಪರಿಹಾರವಾಗುತ್ತದೆ.

೨೩. ಇಲ್ಲಿಯೇ ಬೇರೊಂದು ರೀತಿಯ ಚಮತ್ಕಾರ. ಇದು ಕೂಡ ಹೃದ್ಯವಾದ್ದು.

ಪಿರಿದುಂ ರೇಫದ್ವಯಭಾ
ಸುರಮಂ ಚಂದ್ರಪ್ರಭಾಂಕಮಂ ನಲವಿಂದು
ಚ್ಚರಿಸಿ ಮೊರೆವಳಿಗದಱಿೊಳ್
ದ್ವಿರೇಫನಾಮಂಗಳಾದುವಂದಿಂಬಟಿಯಂ ॥ (೧೫-೪೪)

ಸಂಸ್ಕೃತದಲ್ಲಿ ದುಂಬಿಗಳಿಗೆ ದ್ವಿರೇಫವೆಂಬ ಹೆಸರುಂಟು. ಅದಕ್ಕೆ ಕಾರಣ, ಭ್ರಮರ ಎಂಬ ಶಬ್ದದಲ್ಲಿಯ ಎರಡು ರೇಫಗಳು. ಆದರೆ ಇಲ್ಲಿ ಕವಿ ಅಗ್ಗಳ ಚಂದ್ರಪ್ರಭ ಎಂಬ ಶಬ್ದವನ್ನು ಉಚ್ಚರಿಸಿ ಆ ಹೆಸರನ್ನು ದುಂಬಿಗಳು ಪಡೆದುಕೊಂಡುವೆಂದು ಚಮತ್ಕಾರ ಮಾಡಿದ್ದಾನೆ. ಚಂದ್ರಪ್ರಭ ಎಂಬ ಶಬ್ದದಲ್ಲಿಯೂ ಎರಡು ರೇಫಗಳಿವೆಯಷ್ಟೆ!

೨೪. ಕೊನೆಯದಾಗಿ, ಇದೇ ಕಾವ್ಯದೊಳಗಿನ ವಿಭಕ್ತಿ ಪರಿಣಾಮದ ಇನ್ನೊಂದು ಸುಂದರವಾದ ಲಕ್ಷ್ಯ

ತಾಂ ತನ್ನಂ ತನ್ನಿಂದಾ
ದಂ ತನಗೆಡೆಮಾಡೆ ಪುಟ್ಟಿ ತನ್ನತ್ತಣಿ ನೆಂ
ಟುಂ ತನ್ನಯ ಗುಣಮವಿಚಳಿ
ತಂ ತನ್ನೊಳ್ ನೆಲಸೆ ನೆಲಸಿದಂ ನಿರ್ವೃತಿಯೊಳ್ ॥ (೧೬-೫೮)

ಚಂದ್ರಪ್ರಭ ತೀರ್ಥಂಕರನ ಕೈವಲ್ಯಪ್ರಾಪ್ತಿ ವಿಷಯವಾದ ಈ ಪದ್ಯದಲ್ಲಿ ವಿಭಕ್ತಿ ಪರಿಣಾಮವೆಂಬ ಚಮತ್ಕಾರ ವ್ಯಕ್ತವಾಗಿಯೇ ಕಂಡುಬರುವಂತೆ ಕವಿ ಈ ಪದ್ಯವನ್ನು ಕಟ್ಟಿರುವಂತೆ ತೋರುವುದು.

೨೫. ನೇಮಿಚಂದ್ರನ **ಲೀಲಾವತೀ ಪ್ರಬಂಧ** (ಸು. ೧೧೯೦)

ಯೌವನಕ್ಕೆ ಬಂದ ಲೀಲಾವತಿಯ ಮದುವೆಗಾಗಿ ಅವಳ ತಂದೆ ಸ್ವಯಂವರದ ಏರ್ಪಾಡು ಮಾಡಿದ. ಆದರೆ ಆಕೆಗೆ ಯಾವ ರಾಜಪುತ್ರನೂ ಮನಸ್ಸಿಗೆ ಬರಲಿಲ್ಲ. ಇದನ್ನು ಕವಿ ತಿಳಿಸುವುದು ಹೀಗೆ:

ನೇಯಂ ಕವಿತೆಗೆ ನವ ಚಾಂ
ಪೇಯಂ ಮಧುಕರಿಗೆ ಸಲ್ಲದಂತಿರೆ ದೊರವೆ
ತ್ತಾ ಯುವತಿಗೆ ಚಿತ್ತೋದ್ಭವ
ದಾಯೆಯೆನಲ್ ಸಂದುದಿಲ್ಲ ರಾಜಸಮಾಜಂ ॥ (೭-೭೭)

ಇಲ್ಲಿ "ನೇಯಂ ಕವಿತೆ...ಸಲ್ಲದಂತಿರೆ" ಎಂಬ ಮಾತು ಗಮನಸಿಬೇಕಾದ್ದು. ಸಂಸ್ಕೃತ ಕನ್ನಡ ವೈಯಾಕರಣರೂ ಆಲಂಕಾರಿಕರೂ "ಕವಿತೆಗೆ ನೇಯ ಒಂದು ದೋಷ" ಎಂದು ವಿವರಿಸಿ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಈ ಪ್ರಕ್ರಿಯೆ ಅಲಂಕಾರದ ವಿಷಯವಾದರೂ ವಾಕ್ಯರಚನೆ, ವಾಕ್ಯಶುದ್ಧಿ, ಇವು ಕಾರಣವಾಗಿ ವ್ಯಾಕರಣದ ವಿಷಯವಾಗಿ 'ಶಬ್ದಮಣಿ ದರ್ಪಣ' ಮೊದಲಾದೆಡೆ ಪ್ರಸ್ತಾಪವಿದೆ. ಸ್ಪಷ್ಟವಾಗಿ ಅಭಿಪ್ರಾಯವಾಗಬೇಕಾದರೆ ಹೇಳಬೇಕಾದ ಮಾತನ್ನು ಅಧ್ಯಾರೋಪ ಮಾಡದೆ ಹೇಳಿ, ವಿಶದಪಡಿಸಬೇಕು. ಹಾಗಲ್ಲದೆ ಸಂದೇಹಕ್ಕೆ ಅವಕಾಶವಾಗುವಂತಾಗಿ ಕಷ್ಟಪಟ್ಟು ಊಹಿಸಿ ತಿಳಿಯು ವಂತಾಗುವುದು ನೇಯದ ದೋಷ.

೨೬. ಬಂಧುವರ್ಮನ **ಜೀವ ಸಂಬೋಧನ** (ಸು. ೧೧೯೦)

ಧನ್ಯಕುಮಾರ ಚರಿತೆಯ ಭಾಗವಾಗಿ, ಆತನ ಮಹಿಮೆಯನ್ನು ವರ್ಣಿಸುವ ಒಂದು ವೃತ್ತ ಹೀಗಿದೆ :

ಪರದಿನ ದಾನಧರ್ಮದ ನಿಯೋಗದ ಜಾಗದ ನಿಟ್ಟೆಯಿಂ ನಿರಂ
ತರಮಸೆದಿರ್ದು ವೃತ್ತಿಯ ವಿಭೂತಿಯ ರಂಜನೆ ಶಬ್ದಶಾಸ್ತ್ರದಂ
ತಿರೆ ಬುಧರಪ್ಪರವರ್ ಬಳಸಿ ಬಂದಿರೆ ಸಂದಿರೆ ಪೆಂಪು ಧಾತ್ರಿಯೊಳ್
ನಿರತಿಶಯಂ ಸಮಸ್ತಮಯಮಾಯ್ತೆನೆ ಧನ್ಯಕುಮಾರನೊಪ್ಪಿದಂ ॥(೧೧-೫೬)

ಆತನ ವ್ಯಾಪಾರ ವೃತ್ತಿಯ ಮಹಿಮೆ ಶಬ್ದಶಾಸ್ತ್ರದ ಹಾಗೆ ಇರುವುದು ಹೇಗೆ ಸಾಧ್ಯ? ವ್ಯಾಪಾರ ವಹಿವಾಟು ವೃತ್ತಿಯ ವೈಭವ ಹೇಳುವುದು ಇಲ್ಲಿ ವರ್ಣ್ಯ ವಿಷಯ. ವ್ಯಾಕರಣದ ಅಭಿಧಾ ಲಕ್ಷಣಾ ವ್ಯಂಜನಾ ಎಂಬ ಮೂರು ಶಬ್ದಧರ್ಮಗಳ ಪ್ರಸಕ್ತಿಯ ಮೂಲಕ ವಿರೋಧಾಭಾಸವನ್ನು ಕವಿ ಉಂಟು ಮಾಡಿದ್ದಾನೆ.

೨೭. ಜನ್ನನ **ಅನಂತನಾಥ ಪುರಾಣ** (೧೧೯೦/೧೨೩೦)

ಇಲ್ಲೊಂದು ವಿಭಕ್ತಿ ಪರಿಣಾಮದ, ಚಂದ್ರಪ್ರಭ ಪುರಾಣದಲ್ಲಿ ಬಂದಿರುವ ರೀತಿಯ (೧೬-೧೮), ಸುಂದರವಾದ ಉದಾಹರಣೆಯುಂಟು. ಇದು ಅನಂತನಾಥನು ಸಿದ್ಧಪದವಿಗೆ ಸಂದುದನ್ನು ಹೇಳುವುದು.

ಸನ್ನಿದಮೆನೆ ತಾಂ ತನ್ನಂ
ತನ್ನಿಂದಂ ಕಂಡು ತನಗೆ ತನ್ನತ್ತಣಿನೇಂ
ತನ್ನ ಗುಣಂಗಳ್ ನಱೆದಿರೆ
ತನ್ನೊಳೆ ನಿಂದನೊ ವನೇಯಜನಮುಖತಿಲಕಂ ॥ (೧೪-೫೮)

ಇಲ್ಲಿಯೂ ತಾನ್ ಎಂಬ ಪ್ರಥಮ ಪುರುಷ ಸರ್ವನಾಮ ತನ್ನ ಸಪ್ತ ವಿಭಕ್ತಿಗಳನ್ನೂ ಅನುಕ್ರಮವಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

ಕೇಶಿರಾಜನ **ಶಬ್ದಮಣಿದರ್ಪಣ** (ಸು. ೧೨೬೦)

ನಾಗವರ್ಮನ ಕಾವ್ಯಾವಲೋಕನವನ್ನು ಹಲವೆಡೆ ವ್ಯಾಕರಣ ವಿವೇಚನೆಗೆ ಬಳಸಿರುವ ಈ ಪ್ರಸಿದ್ಧ ಹಳಗನ್ನಡ ವ್ಯಾಕರಣದಲ್ಲಿ ಅಲ್ಲಿಯ ಚಮತ್ಕಾರದ ಸೂತ್ರ ಮತ್ತು ಉದಾಹರಣ ಪದ್ಯಗಳೇ ಕಂಡುಬಂದಿರುವುದರಿಂದ ಅವನ್ನು ಇಲ್ಲಿ ಆವೃತ್ತಿಗೊಳಿಸಿಲ್ಲ.

೨೮. ಆಚಣ್ಣನ **ವರ್ಧಮಾನ ಪುರಾಣ** (ಸು. ೧೧೯೫)

ಮಗಧವಿಜಯದ ವಿಸ್ತೃತ ವರ್ಣನೆಯ ಒಂದು ಗದ್ಯಭಾಗದಲ್ಲಿ ಎರಡು ವಾಕ್ಯಾಂಕಗಳನ್ನೂ ಒಂದು ಕಂದಪದ್ಯವನ್ನೂ ಈಗ ನೋಡಬಹುದು:

"ಪ್ರಸಿದ್ಧ ಕವಿಕೃತ ಶ್ರವ್ಯಕಾವ್ಯದಂತೆ ಸಮೀಹಿತಾಶೇಷ ಸರಸ ಪದಾರ್ಥ ಸಾರ್ಥಾಳಂಕಾರಮುಂ ಸಮಾಸ ಪ್ರಕರಣದಂತೆ ಬಹುವ್ರೀಹಿವಿಭ್ರಾಜಿತಮುಂ"
(೧-೪೬ ವ.)

ಪರಿಕಿಸುವೊಡವಗ್ರಹಮು
ದ್ಧುರ ಸಿಂಧುರ ಬಂಧುರಾಂಗದೊಳ್ ಗುಣಲೋಪಂ
ವರಶಬ್ದಶಾಸ್ತ್ರದೊಳ್ ತಾಂ
ದೊರೆಕೊಳ್ಗುಮದಲ್ಲದಿಲ್ಲ ತಜ್ಜನಪದದೊಳ್ ॥ (೧-೪೮)

ಮೊದಲ ಗದ್ಯಭಾಗದಲ್ಲಿ ಶ್ರವ್ಯಕಾವ್ಯದ ಹಾಗೆ ಅಪೇಕ್ಷಿತವಾದ, ಪೂರ್ಣವಾದ, ರಸಭರಿತವಾದ ಶಬ್ದಾರ್ಥ ಮತ್ತು ಅರ್ಥವತ್ತಾದ ಅಲಂಕಾರಗಳು ಎನ್ನುವ ಮಾತು ತನಗೆ ತಾನೇ ಸರಿ; ಆದರೆ ರಾಜ್ಯ ವರ್ಣನೆಗೆ ಹೇಗೆ ಅನ್ವಯ? ವಿರೋಧಾಭಾಸವನ್ನು ತರುವ ಶ್ರವ್ಯಕಾವ್ಯದ ಹಾಗೆ ಎಂಬ ಮಾತನ್ನು ಅಲಕ್ಷಿಸಿ, ಅಪೇಕ್ಷಿತವಾದ, ಸಮಸ್ತ, ಸ್ವಾರಸ್ಯ (ನೂತನ) ಆದ ಪದಾರ್ಥಗಳನ್ನು ಕೊಳ್ಳುವ ಮಾರುವ ವರ್ತಕರ ಸಮೂಹದಿಂದ ಶೋಭಿಸುವಂಥದು ಎಂದು ಆಶಯವನ್ನು ಗ್ರಹಿಸಿದಾಗ ಅನ್ವಯ ಸುಕರವಾಗುತ್ತದೆ. ಎರಡನೆಯ ವಾಕ್ಯಾಂಶದಲ್ಲಿ ಹೀಗೆಯೇ ಸಮಾಸ ಮತ್ತು ಅದರ ಒಂದು ಪ್ರಕಾರವಾದ ಬಹುವ್ರೀಹಿ ಎಂಬ ಆಶಯವನ್ನು ಅಲಕ್ಷಿಸಿ, ಸಮೃದ್ಧವಾದ ಬತ್ತದ ಬೆಳೆಯಿಂದ ಶೋಭಿಸುವುದು ಎಂದು ಹೇಳಿಕೊಳ್ಳಬೇಕು (=ಬಹುವ್ರೀಹಿ).

ಇನ್ನು ಕಂದಪದ್ಯದ ಆಶಯ: ಮಗಧ ವಿಷಯದಲ್ಲಿ, ವಿಚಾರ ಮಾಡಿದರೆ, 'ಅವಗ್ರಹ' ಎಂಬ ಶಬ್ದ ಆನೆಯ ಮನೋಹರವಾದ ಅಂಗದಲ್ಲಿ ಹಣೆ ಎಂಬ ಅರ್ಥದಲ್ಲಿ ಉಂಟು. ಅನಾವೃಷ್ಟಿ ಅಥವಾ ಬರ ಎಂಬ ಅರ್ಥದಲ್ಲಿ ಇಲ್ಲ (ಅವಗ್ರಹ = ಆನೆಯ ಹಣೆ ; ಬರ, ಅನಾವೃಷ್ಟಿ) ಎಂದೂ ಗುಣಸಂಧಿ ಲೋಪಸಂಧಿಗಳೆಂಬವು ವ್ಯಾಕರಣ ಶಾಸ್ತ್ರದಲ್ಲಿ ಉಂಟು, ಸದ್ಗುಣಗಳ ಹಾನಿ ಎಂಬ ಅರ್ಥದಲ್ಲಿ ಇಲ್ಲ ಎಂದೂ ಅರ್ಥ ಮಾಡಿಕೊಂಡಾಗ ಅಭಿಪ್ರಾಯ ವಿಶದಗೊಳ್ಳುತ್ತದೆ.

೩೦. ಇದೇ ಕಾವ್ಯದ ಇನ್ನೊಂದು ಕಂದಪದ್ಯವನ್ನು ನೋಡೋಣ : ಇಲ್ಲಿ ದೇವನೊಬ್ಬನ ವರ್ತನೆಯನ್ನು ವ್ಯಾಕರಣ ವಿಷಯಕ್ಕೆ ತುಂಬ ಚೆನ್ನಾಗಿ ಹೊಂದಿಸಿರುವುದು ಕಾಣುತ್ತದೆ.

ಮುನಿಯೊಬ್ಬನು ನಿದಾನವನ್ನು ಮಾಡಿ ಮರಣವನ್ನು ಪಡೆದು ಶತಾರಕಲ್ಪದಲ್ಲಿ ಸಾಮಾನಿಕ ದೇವನಾಗಿ ಹುಟ್ಟಿದನೆಂದು ಹೇಳುವುದು ಈ ಪದ್ಯದ ಉದ್ದೇಶ :

ಪ್ರಾತಿಪದಿಕಂಬೊಲಾತನ
ಧಾತುಕನ ವಿಭಕ್ತಿ ಭೂಷಿತಂ ನಿಯತಾರ್ಥೋ
ಪೇತಂ ನಿಶ್ಚಿತನಾಮ
ಖ್ಯಾತಂ ತಾಂ ಪ್ರತ್ಯಯಾರ್ಹನಾದಂ ದಿವಿಜಂ ॥ (೩-೨೪)

ಪ್ರಾತಿಪದಿಕ, ಧಾತು, ವಿಭಕ್ತಿ, ಅರ್ಥ, ನಿಶ್ಚಿತನಾಮ, ಪ್ರತ್ಯಯ ಈ ಶಬ್ದಗಳು ವ್ಯಾಕರಣಕ್ಕೆ ಸಂಬಂಧಪಟ್ಟವೇ ಆಗಿವೆ. ಪ್ರಾತಿಪದಿಕದ (ಅಥವಾ ಲಿಂಗ) ಲಕ್ಷಣವೆಂದರೆ, ಅದು ಧಾತುವಲ್ಲದ್ದು, ವಿಭಕ್ತಿ ಪ್ರತ್ಯಯ ಹತ್ತಿಲ್ಲದುದು, ಗೊತ್ತಾದ ಅರ್ಥ ಕೊಡುವಂಥದು, ನಾಮಾರ್ಥಕವಾದ್ದು, (ವಿಭಕ್ತಿ) ಪ್ರತ್ಯಯ ಸ್ವೀಕಾರ ಯೋಗ್ಯವಾದ್ದು ಎನ್ನುವುದು ತಿಳಿದ ಸಂಗತಿ. ಈ ಪದ್ಯವನ್ನು ಕಾವ್ಯಾವಲೋಚಕನದ "ಧಾತುವಿವರ್ಜಿತಮರ್ಥೋಪೇತಂ ಲಿಂಗಂ..." (ಸೂತ್ರ ೧೫), ಶಬ್ದಮಣಿದರ್ಪಣದ "ಕ್ರಿಯೆಯಂ ನುಡಿಯದುದು ವಿಭ ಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ" (ಸೂತ್ರ ೮೨) ಎಂಬ ವಾಕ್ಯಗಳ ನೆನಪು ತರುತ್ತದೆ.

ಸರಿಯೆ ಇದರ ವಿವರಗಳು ದಿವಿಜನಿಗೆ ಅನ್ವಯವಾಗುವುದು ಹೇಗೆ? ದಿವಿಜನು ಅಧಾತುಕನು, ಎಂದರೆ ಸಪ್ತಧಾತುಗಳಿಂದ ಆದ ದೇಹವನ್ನು ಪಡೆದವನಲ್ಲ; ಅವಿಭಕ್ತಿ ಭೂಷಿತನು ಎಂದರೆ ಮೇಲು ಕೀಳುಗಳೆಂಬ ಭೇದಭಾವಗಳಿಲ್ಲದೆ ದೇವತೆಗಳೊಂದಿಗೆ ಕೂಡಿಯೇ ಶೋಭಿಸುವವನು; ನಿಯತಾರ್ಥೋಪೇತಂ, ಎಂದರೆ ನಿಶ್ಚಿತವಾದ ವಸ್ತು ಸ್ವಭಾವದಿಂದ ಕೂಡಿದವನು (ಹೆಸರಿನಿಂದ ಖ್ಯಾತನಾದವನು); ಪ್ರತ್ಯಯಾರ್ಹಂ, ಎಂದರೆ ಜ್ಞಾನಕ್ಕೆ ಅರ್ಹನಾದವನು-ಹೀಗೆ ಅನ್ವಯಿಸಿಕೊಂಡಾಗ ವ್ಯಾಕರಣಕ್ಕೆ ಸಂಬಂಧಿಸಿದ ಹಾಗೆ 'ಪ್ರಾತಿಪದಿಕಂಬೊಲ್' ಎಂದು ಬಂದಿರುವ ವಿರೋಧಾಭಾಸದ ನಿವಾರಣೆ ಯಾಗುತ್ತದೆ.

೩೧. ಇದೇ ಕಾವ್ಯ ಒಂದು ಗದ್ಯಭಾಗ ಹೀಗಿದೆ :

ಕ್ರಿಯಾಪದ ಪ್ರಾಗ್ದೇಶದಂತುಪಸರ್ಗಾಕ್ರಾಂತೆಯಾಗಿರ್ದ ನಿಶಾಟ ನಿಕಟ

ಕಾಂತೆಯಂ ತೊಟ್ಟನೆ ಕಟ್ಟಿದಿರೊಳ್ ಕಂಡ.... (೧೫-೫೨ ವ.)

ವೃಷಭದತ್ತನೆಂಬ ಒಬ್ಬ ಜೈನನಾದ ವೈಶ್ಯೋತ್ತಮನು ಒಮ್ಮೆ ಕಾಡಿನೊಳಗೆ ಸಂಚರಿಸುತ್ತ, ಕಿರಾತನೊಬ್ಬನ ಕೈಯಲ್ಲಿ ಸಿಕ್ಕಿಕೊಂಡ ಒಬ್ಬ ಹೆಂಗಸನ್ನು ಪಾರು ಮಾಡಿದನೆಂಬ ಕಥಾಂಶ ಇಲ್ಲಿ ಸೂಚಿತವಾಗಿದೆ. ಕ್ರಿಯಾಪದದ ಹಿಂದೆ ಸೇರುವ ಉಪಸರ್ಗದಂತೆ ಆ ಕಾಂತೆ ಧೂರ್ತನ ಹತ್ತಿರವಿದ್ದುದು ವೈಶ್ಯನಿಗೆ ಕಂಡಿತಂತೆ. ಇಲ್ಲಿ 'ಉಪಸರ್ಗ' ಎಂದರೆ ಪೀಡೆಗೆ, ಕಾಟಕ್ಕೆ ಆಕ್ರಾಂತೆಯಾಗಿದ್ದ (ಗುರಿಯಾಗಿದ್ದ) ಎಂದು ಅರ್ಥ ಮಾಡಿಕೊಳ್ಳಬೇಕು. 'ಕ್ರಿಯಾಪದದಂತೆ' ಎಂಬ ವ್ಯಾಕರಣ ಪರಿಭಾಷೆಯ ನಿಷೇಧವನ್ನು ನಿವಾರಿಸಿಕೊಳ್ಳಬೇಕು.

೩೨. ದೇವಕವಿಯ **ಕುಸುಮಾವಳೀ** ಕಾವ್ಯ (ಸು. ೧೨೦೦)

ಈ ಕಾವ್ಯದ ನಾಯಕಿ ಕುಸುಮಾವಳಿ. ಈಕೆಯ ಸೌಂದರ್ಯ ವರ್ಣನೆಯ ಭಾಗವಾಗಿ ಈ ಕಂದಪದ್ಯವುಂಟು.

ಅವತಂಸಲಕ್ಷ್ಮಿಗುತ್ತಂ
ಸವೆನಿಪ್ಪ ವಿಳಾಸದಿಂ ಲಕಾರಾವರ್ತ
ಪ್ರವಿದಿತ ಶೋಭೆಯನಮರ್ದಿ
ರ್ಪುವು ಕುಸುಮಾವಳಿಯ ಮಿಸುವ ಕರ್ಣದ್ವಿತಯಂ ॥ (೧೨-೬೦)

ಅಲಂಕಾರ ಲಕ್ಷ್ಮಿಯ ಕರ್ಣಾಭರಣವೆನ್ನಿಸುವ ವಿಲಾಸದಿಂದ, ಸುರುಳಿಯಾದ ಲಕಾರದ ಚೆಲುವಿನಿಂದ ಕುಸುಮಾವಳಿಯ ಕಿವಿಗಳು ಶೋಭಿಸುತ್ತವೆ ಎಂದಿದ್ದಾನೆ ಕವಿ. ಹೊಯ್ಸಳರಿಗೆ ಸ್ವಲ್ಪ ಹಿಂದಿನ ಕಾಲಘಟ್ಟದಲ್ಲಿಯ ಲಕಾರವನ್ನು, ಎಂದರೆ ಲಕಾರದ ಲಿಪಿಗೆ ಕಿವಿಯ ಹೋಲಿಕೆಯಿದ್ದಂತಿದೆ.

೩೩. ಇಲ್ಲಿಯೇ ಚೌಂಡರಸನ **ಅಭಿನವದಶಕುಮಾರಚರಿತೆಯ** ಇದೇ ಬಗೆಯ ಇನ್ನೊಂದು ಪದ್ಯವಿರುವುದನ್ನು ಎತ್ತಿ ಹೇಳಬಹುದು:

ಕಿವಿಯೆಂದು ಬರೆಯುತುಂ ಮೊದ
ಲ ವರ್ಣಮಂ ಮಱೆದು ಕಡೆಯ ವರ್ಣಮನಂಗೋ
ದ್ಭವ[ನಾ]ರ್ತು ಬರೆದನೆಂಬಂ
ತೆ ವಿಳಾಸಂಬೆತ್ತುಪವಳ ವರ್ಣಿತ ಕರ್ಣಂ ॥ (೬-೫೧)

ಇದು ಅವಂತಿಸೌಂದರಿಯೆಂಬ ಸುಂದರಿಯ ವರ್ಣನೆಯ ಭಾಗ. ಕಿವಿ ಎಂದು ಬರೆಯಲು ಹೊರಟು, ಮೊದಲ ವರ್ಣ 'ಕಿ' ಎಂಬುದನ್ನು ಬರೆಯಲು ಮರೆತು ಹೋಗಿ 'ವಿ' ಎಂಬುದನ್ನು ಮನ್ಮಥ ಬರೆದನೆನೋ ಎನ್ನುವಂತೆ ಆಕೆಯ ಕಿವಿಗಳಿದ್ದುವಂತೆ. ೧೨-೧೩ನೆಯ ಶತಮಾನಗಳ ಸಂಧಿಕಾಲದ ಕವಿಯಾದ್ದರಿಂದ, ಆ ಕಾಲದ ಕನ್ನಡ ಲಿಪಿಯ ಪರಿಶೀಲನದಿಂದ ಇದನ್ನು ಸ್ಪಷ್ಟ ಮಾಡಿಕೊಳ್ಳಬೇಕು.

೩೪. ನಡುಗನ್ನಡ ಕಾಲದಲ್ಲಿದ್ದ ಪದ್ಮರಸನೆಂಬ ಕವಿ ತನ್ನ **'ಶೃಂಗಾರಕಥೆ'** ಎಂಬ ರಚನೆಯಲ್ಲಿ ಕೂಡ ಸದೃಶ ಪದ್ಯವೊಂದನ್ನು ಸಾಂಗತ್ಯ ರೂಪದಲ್ಲಿ ಬರೆದಿದ್ದಾನೆ:

ಲೋಕದೊಳಗೆ ಹಲ ಲಿಪಿಯುಂಟವಱವ
 ಆಕಾರವೆಲ್ಲ ವಿಕಾರ
ಈ ಕರ್ಣಾಟ ಶ್ರೀಕಾರದಿರವ ಪೋ
 ಲ್ತಾಕೆಯ ಕರ್ಣವೆಸೆದುಪು ॥
(ಉದ್ಧೃತಿ : ಕರ್ನಾಟಕ ಕವಿಚರಿತೆ, ಸಂ. ೨-ಪು. ೨೬೭)

ಇಲ್ಲಿ ಕಿವಿಗಳು ಕನ್ನಡ ಲಿಪಿಯ ಶ್ರೀಕಾರವನ್ನು ಹೋಲುತ್ತಿದ್ದುವು ಎಂದಿದೆ.

೩೫. ಕಮಲಭವನ **'ಶಾಂತೀಶ್ವರ ಪುರಾಣ'** (೧೨೩೫)

ಅಪರಾಜಿತ-ಅನಂತ ವೀರ್ಯ ಎಂಬ ರಾಜಕುಮಾರರ ಓಲಗಶಾಲೆಯಲ್ಲಿ ನಡೆದ ಗೀತನೃತ್ಯಾದಿ ರಸರಂಜನೆಯ ಕಾರ್ಯಕ್ರಮದ ವರ್ಣನೆಯ ಭಾಗವಾಗಿ

"ಯತಿಯಂತೆ ಗತಿಯನಜಿದು, ವ್ಯಾಕರಣದಂತೆ ಶಬ್ದಮಾರ್ಗ ಸಂಬಂಧಮಜಿದು..." ಎಂಬ ವರ್ಣನಾಂಶವಿದೆ (೭-೯೩ ವ.)

ಜತಿಗೆ ಅನುಗುಣವಾಗಿ ಲಯವನ್ನು ಹಿಡಿದು, ವ್ಯಾಕರಣದ ಹಾಗೆ ಶಬ್ದದ ಮತ್ತು ಕವಿಮಾರ್ಗದ ಸಂಬಂಧವನ್ನು ತಿಳಿದು ವಾದ್ಯವಾದನವನ್ನು ಅಲ್ಲಿಯ ವಾದ್ಯಕಾರರು ಮಾಡುತ್ತಿದ್ದರಂತೆ. ಸಂಗೀತಕ್ಕೆ ಅನ್ವಯವಾಗುವಂತೆ ಶಬ್ದ ಎಂಬುದನ್ನು ಮೃದಂಗಾದಿಗಳ ಧ್ವನಿಗೂ ಮಾರ್ಗ ಎಂಬುದನ್ನು ವಾದನ ಸಂಪ್ರದಾಯಕ್ಕೂ ಅನ್ವಯಿಸುವುದಾಗಬೇಕು.

೩೬. ಇದೇ ಕಾವ್ಯದಲ್ಲಿ ಶಾಂತಿನಾಥನ ಯೌವರಾಜ್ಯಪದವಿ ಮತ್ತು ಮಂಡಳೇಶ್ವರ ಪದವಿಯಲ್ಲಿದ್ದ ಸಂಭ್ರಮವನ್ನು ವರ್ಣಿಸುವಾಗ

"ಏತಥೈಕ ಶಬ್ದ ಮಾತ್ರ ಜ್ಞಾನಹೀನನಾಗಿಯುಂ ಸರಳ ಶಬ್ದ ಶಾಸ್ತ್ರಾಗಮಾನೀತ ವಿವೇಕಾಭಿಜ್ಞನುಂ..." (೧೫-೨೩ ವ.)

ಎನ್ನುವ ವಿರೋಧಾಭಾಸ ಮೂಲವಾದ ಒಂದು ಚಮತ್ಕಾರದ ಮಾತನ್ನು ಬಳಸಿದೆ. ಇದರ ಆಶಯವೆಂದರೆ, "ಸುಳ್ಳು ಎಂಬ ಒಂದೇ ಒಂದು ಶಬ್ದವನ್ನೂ ಬಲ್ಲವನಲ್ಲವಾಗಿಯೂ, ವ್ಯಾಕರಣ ಆಗಮಗಳ ಸಮೂಹ ವಿವೇಕ ಇವುಗಳನ್ನೆಲ್ಲ ಬಲ್ಲವನಾಗಿದ್ದನು" ಎಂದು. "ಒಂದೇ ಮಾತು ತಿಳಿಯದವನು ಎಲ್ಲವನ್ನೂ ಬಲ್ಲವನು" ಎಂಬ ವಿರೋಧಾಭಾಸ ಇಲ್ಲಿ ಸ್ಪಷ್ಟ.

೩೭. **'ಚೌಂಡರಸನ ಅಭಿನವ ದಶಕುಮಾರಚರಿತ'** (ಸು. ೧೩೧೦)

ಈ ಕಾವ್ಯದಲ್ಲಿ ಕಿವಿಯ ವರ್ಣನೆಯ ಒಂದು ಲಿಪಿ ಚಮತ್ಕಾರವನ್ನು (೬-೫೧) ಈಗಾಗಲೇ ನಾವು ನೋಡಿದ್ದೇವೆ. ಈ ಕೃತಿ ದಂಡಿಯ ಕೃತಿಯ ಭಾಷಾಂತರವಾದ ಕಾರಣದಿಂದ, ಅಲ್ಲಿಯ ಹಾಗೆಯೇ ಇಲ್ಲಿ ಕೂಡ ಮಂತ್ರಗುಪ್ತ ನಿರೋಷ್ಠ್ಯಕಥಾ ವೃತ್ತಾಂತವೆಂಬ ೧೩ನೆಯ ಆಶ್ವಾಸದಲ್ಲಿ ಓಷ್ಠ್ಯ ಸ್ವರಗಳ (ಉ ಊ ಒ ಓ) ಹಾಗೂ ವರ್ಗೀಯ ವ್ಯಂಜನಗಳಾದ ಪವರ್ಗಾಕ್ಷರಗಳ (ಪ ಫ ಬ ಭ ಮ) ಬಳಕೆಯಿಲ್ಲದೆ ಒಂದು ಕಥಾಸಂದರ್ಭವನ್ನು ನಿರ್ವಹಿಸಿದೆ. ಹೀಗೆ ನಿರ್ವಹಿಸಿದ ೬೧ ಕಂದವೃತ್ತಗಳೂ ೪೮ ಲಘು ಪ್ರಮಾಣದ ಗದ್ಯಭಾಗಗಳೂ ಇಲ್ಲಿ ಲಿಖಿತವಾಗಿರುವುದು ಆಶ್ಚರ್ಯ ಜನಕವಾಗಿದೆ. ಕಣ್ತಪ್ಪಿ ಎಂಬಂತೆ ವಿರಳವಾಗಿ ಓಷ್ಠ್ಯ ವರ್ಣಗಳು ನುಸುಳಿರುವುದೇನೋ ಉಂಟು.

ಮಾದರಿ ತಿಳಿಯಲು ಸ್ವಲ್ಪ ಗದ್ಯ ಮತ್ತು ಪದ್ಯಗಳು:

ಅಂತಾ ಕಳಿಂಗನಗರಿಯಂ ಕಂಡಾಕ್ಷಣದಿಂ
ಸಂತತ ರಥಾಂಗ ತತಿಗತಿ
ಚಿಂತಾಹತಿ ನೆಲಸೆ ಧರೆಗೆ ನಿದ್ರಾಲಸ್ಯಂ
ತಿಂತಿಣಿಯಿನಾಗೆ ಸರಸಿಜ
ಕಾಂತಂ ತಾನಸ್ತಗಿರಿಗೆ ನೆಟ್ಟನೆ ಸಾರ್ದಂ ॥

ಅಂತಸ್ತಗಿರಿಯನೆಯ್ದಲ್ಕಾ ಕಳಿಂಗನಗರಿಯಂತಿಕಶಾಖೆಗಳಲ್ಲಿ ಕಣ್ಗೆಯ್ಯಲೆಂದಿರ್ದ ಕಿನ್ನರ ಜಾಯಾಕಾಂತರ

ಇನಿತಾಯಾಸಂಗೆಯ್ಯಲ್
ತನಗೇತಱ ಸಿದ್ಧಿ ತಾನದೆಲ್ಲಿಯ ಸಿದ್ಧಂ
ಸನಯಂ ತಾನಲ್ತೆನಿಸಿದ
ದನಿ ಕರ್ಣಕ್ಕೆಯ್ದಲದಱ ಸರಿಸಕೆ ನಡೆದಂ ॥ (೧೩-೫, ೬)

ಇಲ್ಲಿ ಓಷ್ಠ್ಯವರ್ಣಗಳು ಪ್ರಯೋಗವಾಗಿಲ್ಲವೆಂಬುದನ್ನು ನಾವು ಗಮನಿಸಬಹುದು. (ವಿಸ್ತೃತ ವಿವರಣೆಗೆ ನೋಡಿ : 'ಕನ್ನಡ ಚಿತ್ರಕಾವ್ಯ'. ಪು. ೧೨೫-೨೮)

೩೭. ಷಡಕ್ಷರಿಯ **ಶಬರಶಂಕರವಿಲಾಸ** (ಕ್ರಿ.ಶ. ಸು. ೧೭ನೆಯ ಶ.)

ಪರಮೇಶ್ವರನ ದೇವಸಭೆಯನ್ನು ಕವಿ ಷಡಕ್ಷರಿ ಚಮತ್ಕಾರಿಕವಾಗಿ ವರ್ಣಿಸುತ್ತ, ಒಂದು ಕಡೆ ಆ ಸಭೆಯನ್ನು ಹೀಗೆ ಒಂದು ಗದ್ಯಭಾಗದಲ್ಲಿ ಕೊಂಡಾಡಿದ್ದಾನೆ.

ವ್ಯಾಕರಣದಂತೆ ವಿತತಾವ್ಯಯ ಪ್ರತ್ಯಯ ಪ್ರಕೃತಿ ನಿಯುಕ್ತಮುಂ ಸಮಸ್ತ ಕಾರಕ ಕ್ರಿಯಾಪದ ಸಮಾಶ್ರಿತಮುಂ... (೧-೮೦ ವ.)

ವ್ಯಾಕರಣವೆಂದ ಮೇಲೆ ಅವ್ಯಯ, ಪ್ರತ್ಯಯ-ಪ್ರಕೃತಿ, ಕಾರಕ-ಕ್ರಿಯಾಪದ ಎಲ್ಲಾ ಸಹಜವೇ. ಆದರೆ ಸಭೆಗೆ ಅನ್ವಯಿಸುವುದು ಹೇಗೆ? ವಿಸ್ತಾರವಾದ, ಯಾವಾಗಲೂ ಇರುವುದಾದ, ವಿಶ್ವಾಸಾರ್ಹವಾದ (ಜ್ಞಾನಸಂಪನ್ನವಾದ ಅಥವಾ ಅಧೀನವಾದ : ಪ್ರತ್ಯಯ) ಮಂತ್ರಿಮಂಡಲವು ಅಧಿಕಾರದಲ್ಲಿ ನಿಯೋಜನೆಗೊಂಡುದಾಗಿರುವ (ಪ್ರಕೃತಿ ನಿಯುಕ್ತ), ಸರ್ವಪ್ರಕಾರದ ಕ್ರಿಯೆಗಳು ನಡೆಯಲು ಉಪಕಾರಕವಾದ ಕ್ರಿಯಾಸ್ಥಾನಗಳನ್ನು ಆಶ್ರಯಿಸಿರುವ (ಕಾರಕ ಕ್ರಿಯಾಪದ) ಎಂಬುದಾಗಿ ಅರ್ಥಗಳನ್ನು ಕಂಡುಕೊಳ್ಳಬೇಕು.

ಕನ್ನಡ ಸಾಹಿತ್ಯದ ಪ್ರೌಢ, ಪ್ರಾಚೀನ ಕವಿಗಳೂ ಲಾಕ್ಷಣಿಕರು ವ್ಯಾಕರಣ ಶಾಸ್ತ್ರವನ್ನು ಎಷ್ಟುಮಟ್ಟಿಗೆ ಬಲ್ಲವರಾಗಿದ್ದರು, ಮೆಚ್ಚಿಕೊಂಡಿದ್ದರು ಎಂಬುದನ್ನು ಈ ಕೆಲವು ಉಲ್ಲೇಖಗಳಿಂದಲೂ ಉದಾಹರಣೆಗಳಿಂದಲೂ ತಿಳಿಯಬಹುದಾಗಿದೆ.

[ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ದಿನಾಂಕ ೧೭-೫-೨೦೧೫ರಂದು ಮಾಡಿದ ಪ್ರೊ. ಎಂ.ಪಿ.ಎಲ್. ಶಾಸ್ತ್ರಿ ಸ್ಮಾರಕ ದತ್ತಿ ಉಪನ್ಯಾಸ].

■

# ಕವಿರಾಜಮಾರ್ಗದ ಧ್ವನಿಕಂದ ಮತ್ತು ಸಂಸ್ಕೃತದ ಧ್ವನಿಕಾವ್ಯ ಲಕ್ಷಣಕಾರಿಕೆ

◆

**ಯಲ್ಲಾಪುರ ಕೃಷ್ಣ ಶರ್ಮಾ**

## ಧ್ವನಿಕಾವ್ಯ ಲಕ್ಷಣಕಾರಿಕೆ

ಕವಿರಾಜಮಾರ್ಗದ ಧ್ವನಿಕಂದದ ಪುರುಳಿನ ಕುರಿತು ನನ್ನ ಅನಿಸಿಕೆಯನ್ನು ಸಂವಾದಕ್ಕಾಗಿ ಕನ್ನಡ ವಿದ್ವದ್ ಲೋಕದೆದುರು ತೆರೆದಿಡುವ ಉದ್ದೇಶದಿಂದ ಈ ಬರಹಕ್ಕೆ ಹವಣಿಸುತ್ತಿದ್ದೇನೆ. ಮಾರ್ಗಕಾರನು ಧ್ವನಿಕಂದವನ್ನು ಹೆಣೆಯುವಲ್ಲಿ ಧ್ವನಿಕಾವ್ಯ ಲಕ್ಷಣಕಾರಿಕೆಯೇ ಹಿನ್ನೆಲೆಯಾದುದರಿಂದ ಆ ಕಾರಿಕೆಯ ಪರಿಚಯಕ್ಕೆ ಮೊದಲು ತೊಡಗಬೇಕಾದುದು ಕ್ರಮಪ್ರಾಪ್ತ. ಸಂಸ್ಕೃತದ ಧ್ವನ್ಯಾಲೋಕದಲ್ಲಿ ಧ್ವನಿಕಾವ್ಯ ಲಕ್ಷಣಕಾರಿಕೆ ಕಂಡುಬರುತ್ತದೆ. ಧ್ವನ್ಯಾಲೋಕಗ್ರಂಥವು ಕಾಶ್ಮೀರದ ಆನಂದವರ್ಧನನೆಂಬ ಪಂಡಿತನಿಂದ ಕ್ರಿಸ್ತಶಕ ೮೭೦–೮೦ರ ಆಸುಪಾಸಿನಲ್ಲಿ ರಚಿತವಾಗಿರಬೇಕೆಂದು ಊಹಿಸುತ್ತಾರೆ. ಧ್ವನ್ಯಾಲೋಕಕ್ಕಿಂತ ಹಿಂದೆಯೇ ಅಜ್ಞಾತಕರ್ತೃಕವಾದ **ಧ್ವನಿಕಾರಿಕಾ** ಎಂಬ ಚಿಕ್ಕ ಕೃತಿಯೊಂದು ಹಸ್ತಪ್ರತಿರೂಪದಲ್ಲಿ ಕಾವ್ಯಮೀಮಾಂಸಕ ವಿದ್ವಾಂಸರ ಖಾಸಗಿ ಪ್ರಸಾರದ ರೂಪದಲ್ಲಿ ಬಳಕೆಯಲ್ಲಿತ್ತು ಎಂಬುದಾಗಿ ಕಿಂವದಂತಿ ಇದೆ. ಈ ಧ್ವನಿಕಾರಿಕೆಯು ಕ್ರಿಸ್ತಶಕ ೮೧೫ರ ಹಾಗೆ ಮೈದಳೆದಿತ್ತು ಎಂದೂ ಊಹಿಸಲಾಗಿದೆ. ಆನಂದವರ್ಧನನು ಆ ಕಾರಿಕೆಗಳನ್ನು ತನ್ನ ಗ್ರಂಥಕ್ಕೆ ಮೂಲವಾಗಿಟ್ಟುಕೊಂಡು ಸ್ವತಃ ಇನ್ನಷ್ಟು ಪರಿಕರ ಶ್ಲೋಕಗಳನ್ನು ರಚಿಸಿ ಆ ಎಲ್ಲ ಕಾರಿಕೆಗಳಿಗೆ ವೃತ್ತಿಯನ್ನೂ ಬರೆದು **ಧ್ವನ್ಯಾಲೋಕ** ಗ್ರಂಥವನ್ನು ಸಿದ್ಧಪಡಿಸಿದನೆಂದು ಕೆಲವರು ಹೇಳುತ್ತಾರೆ. ಆನಂದವರ್ಧನು ರಚಿಸಿದ ವೃತ್ತಿಗೆ **ಧ್ವನ್ಯಾಲೋಕ**ವೆಂದು ಹೆಸರು ಎಂಬುದಾಗಿ ಕೆಲವರ ಆಶಯ. ಮುಂದೆ ಅಭಿನವಗುಪ್ತನು ಈ ಧ್ವನ್ಯಾಲೋಕಕ್ಕೆ **ಲೋಚನ**ವೆಂಬ ಉತ್ತಮ ವ್ಯಾಖ್ಯಾನವನ್ನು ರಚಿಸಿದ್ದಾನೆ. ಹೀಗೆ **ಧ್ವನಿಕಾರಿಕಾ, ಧ್ವನ್ಯಾಲೋಕ ಧ್ವನ್ಯಾಲೋಕಲೋಚನ** ಎಂಬೀ ಮೂರು ಧ್ವನಿಪ್ರಸ್ಥಾನದ ಮೊದಲ ಹೆಜ್ಜೆಗುರುತುಗಳು ಎಂಬುದು ಪ್ರಸಿದ್ಧವಿದೆ. ಧ್ವನ್ಯಾಲೋಕ ರಚನೆಗಿಂತ ಹಿಂದಿನಿಂದಲೂ ಕೂಡ ಗುರುಶಿಷ್ಯ ಪರಂಪರೆಯ ರೂಪದಲ್ಲಿ ಧ್ವನಿತತ್ತ್ವದ

ಅಧ್ಯಯನ ಅಧ್ಯಾಪನಗಳು ಜರುಗುತ್ತಿದ್ದವು ಎಂಬುದಾಗಿ ಆನಂದವರ್ಧನನು ತನ್ನ ಗ್ರಂಥಾರಂಭದಲ್ಲಿ ಹೇಳಿಕೊಂಡದ್ದಲ್ಲದೇ ಧ್ವನಿಯ ಬಗೆಗೆ ವಿರೋಧಗಳೂ ಕೂಡ ಪರೋಕ್ಷ ರೂಪದಲ್ಲಿ ಕೇಳಿಬರಲಾರಂಭವಾಗಿತ್ತು ಎಂದೂ ಹೇಳಿಕೊಂಡಿದ್ದಾನೆ. ಧ್ವನಿಯೆಂಬುದು ಇಂದು ನಿನ್ನೆಯದಲ್ಲ. ವೈಯಾಕರಣರ ಸ್ಫೋಟ ಪ್ರಕ್ರಿಯೆಯೇ ಈ ಧ್ವನಿಯ ಆವಿಷ್ಕಾರದಲ್ಲಿ ಮೂಲ ಪ್ರೇರಣೆಯನ್ನೊದಗಿಸಿದೆಯೆಂಬುದೂ ಆನಂದವರ್ಧನನ ಅಂಬೋಣ. ಧ್ವನಿಯ ಅಂದರೆ ವ್ಯಂಜನಾವೃತ್ತಿಯ ಬಗೆಗೆ ಕೆಲವರಿಂದ ವಿರೋಧವು ಕೇಳಿಬರಲಾರಂಭವಾದಾಗ ವಿರೋಧ ಪರಿಹಾರಕ್ಕಾಗಿ, ಧ್ವನಿಯ ಸ್ವರೂಪವೇನು ಅದರ ಪ್ರಯೋಜನವೇನು ಎಂಬುದನ್ನು ಕಾವ್ಯಮೀಮಾಂಸಕ ವಿದ್ವಾಂಸರಿಗೆ ಮನದಟ್ಟು ಮಾಡಿ ಕೊಡುವ ಸಲುವಾಗಿ ಧ್ವನ್ಯಾಲೋಕ ರಚನೆಗೆ ತೊಡಗಿದ್ದಾಗಿ ಗ್ರಂಥಕಾರನು ಹೇಳುತ್ತಾನೆ. ಕಾವ್ಯದಲ್ಲಿ ಧ್ವನಿಯ ಸ್ಥಾನವೇನೆಂಬುದು ಸಹೃದಯ ವಿದ್ವಾಂಸರಿಗೆ ಮನವರಿಕೆಯಾದರೆ ಆಗ ಅದರ ಬಗೆಗೆ ಅಸಹನೆ ಅಸಹಿಷ್ಣುತೆಗಳು ದೂರವಾಗಿ ಧ್ವನಿಪ್ರಸ್ಥಾನದ ಕುರಿತು ಸೌಮನಸ್ಯ ವಿಶ್ವಾಸಗಳು ಮೂಡಲು ಅವಕಾಶವಾಗುತ್ತದೆ.

ಧ್ವನಿಯ, ವ್ಯಂಜನಾವೃತ್ತಿಯ ಚರ್ಚೆಯು ಕೇಳಿಬಂದಾಗ ವಿದ್ವತ್ ಕ್ಷೇತ್ರದಲ್ಲಿ ವ್ಯಂಜನಾವೃತ್ತಿಯ ಬಗೆಗೆ ಕೆಲವರಲ್ಲಿ ವಿಚಿಕಿತ್ಸೆ ಅಸಹನೆಯುಂಟಾಯಿತು. ಅಭಿಧಾ ಲಕ್ಷಣಾ ಎಂಬೀ ಎರಡು ಶಬ್ದವೃತ್ತಿಗಳನ್ನು ಎಲ್ಲ ಶಾಸ್ತ್ರಕಾರರೂ ಒಪ್ಪಿದ್ದಾರೆ. ಈ ಎರಡು ಶಬ್ದವೃತ್ತಿಗಳಿಂದಲೇ ಕಾವ್ಯದಲ್ಲೂ ವ್ಯವಹಾರ ನಿರ್ವಾಹವಾಗುತ್ತಿರುವಾಗ ಕಾವ್ಯದ ಮಟ್ಟಿಗೆ ಸೀಮಿತವಾಗಿ ವ್ಯಂಜನೆಯೆಂಬ ಹೊಸದಾಗಿ ಕಲ್ಪಿಸಿದ ವೃತ್ತಿಯಿಂದ ಆಗಬೇಕಾದ್ದೇನಿದೆ? ಅದೂ ಅಲ್ಲದೇ ವ್ಯಂಜನಾವೃತ್ತಿಯು ಶಬ್ದ ಅರ್ಥ ಎರಡರಲ್ಲೂ ಇದೆಯೆಂಬುದು ಧ್ವನಿಪ್ರಸ್ಥಾನದ ವಾದ. ಶಬ್ದವು ಮಾತ್ರವೇ ಅರ್ಥದ್ಯೋತಕ ಅರ್ಥಪ್ರತ್ಯಾಯಕ ಎಂಬುದು ಶಾಸ್ತ್ರಸಂಮತ. ಅರ್ಥವೂ ಕೂಡ ವ್ಯಂಜನಾ ವ್ಯಾಪಾರದ ಮೂಲಕ ಅರ್ಥಾಂತರ ಬೋಧಕ ದ್ಯೋತಕ ಪ್ರತ್ಯಾಯಕ ಎಂಬುದಾಗಿ ಇದುವರೆಗೆ ಶಾಸ್ತ್ರಕಾರರು ಯಾರೂ ಒಪ್ಪಿಲ್ಲ. ಅರ್ಥದಲ್ಲಿ ಅರ್ಥಾಂತರ ಪ್ರತ್ಯಾಯಕ ಶಕ್ತಿಯಿದೆಯೆಂಬುದು ಹೊಸ ಕಲ್ಪನೆ. ಆದ್ದರಿಂದ ಈ ವ್ಯಂಜನೆಯ ಬಗೆಗೆ ಕೆಲವರಿಗೆ ಒಮ್ಮೆಲೇ ವಿಶ್ವಾಸ ಮೂಡಲಿಲ್ಲ. ಕಾವ್ಯದಲ್ಲಿ ವ್ಯಂಜನೆಯ ಉಪಯೋಗ ಉಪಾದೇಯತೆಗಳ ಬಗೆಗೆ ಕೆಲವರು ಪರಿಶೀಲನೆಗೆ ಮುಂದಾದರು. ಆಗ ಅಂತರ್ಭಾವವಾದ ಅನುಮಿತಿ ವಾದ ವಕ್ರೋಕ್ತಿವಾದ ತಾತ್ಪರ್ಯವಾದ ಭಾಕ್ತವಾದ ಮುಂತಾಗಿ ವಿಕಲ್ಪಗಳು ತಲೆದೋರಿದವು. ಶ್ರೀವಿಜಯ, ಪ್ರತೀಹಾರದ, ಇಂದುರಾಜ, ರತ್ನಶ್ರೀಜ್ಞಾನ ಮೊದಲಾದವರು ಅಂತರ್ಭಾವವಾದಗಳು. ಮಹಿಮಭಟ್ಟ, ಜಯಂತಭಟ್ಟ ಮೊದಲಾವರು ಅನುಮಿತಿ ವಾದಗಳು. ಭಾಕ್ತವಾದ ವಕ್ರೋಕ್ತಿವಾದ ಮುಂತಾಗಿ ಇಲ್ಲಿ ಅನೇಕ ವಾದ ವಿಕಲ್ಪಗಳು ಕಾಣಿಸಿಕೊಂಡದ್ದುಂಟು. ಮಹಿಮಭಟ್ಟ ಕುಂತಕ ಮೊದಲಾದವರು ದೊಡ್ಡ ಹೆಸರು ಮಾಡಿದ್ದಾರೆ. ಅಂತರ್ಭಾವವಾದವು ಧ್ವನಿವಿರೋಧಿಯಲ್ಲವೆಂದೂ ಹೇಳುತ್ತಾರೆ. ಅನುಯಾಯಿಗಳ ಅಭಾವದಿಂದಾಗಿ ಅಂತರ್ಭಾವವಾದವು ಮೇಲೇಳಲಿಲ್ಲಾಂತ ತೋರುತ್ತದೆ. ಆನಂದವರ್ಧನನ ನಂತರ ಮಮ್ಮಟನೇ ಮುಂತಾದ ವಿದ್ವಾಂಸರನೇಕರು

ಕಾವ್ಯಪ್ರಕಾಶವೇ ಮುಂತಾದ ಗ್ರಂಥರಚನೆಯ ಮೂಲಕ ಕಾವ್ಯಮೀಮಾಂಸ ಕ್ಷೇತ್ರದಲ್ಲಿ ಧ್ವನಿಪ್ರಸ್ಥಾನವನ್ನು ಸ್ಥಿರವಾಗಿ ನೆಲೆಗೊಳಿಸಿದ್ದಾರೆ. ಭಾರತೀಯ ಕಾವ್ಯಮೀಮಾಂಸಾ ಕ್ಷೇತ್ರದಲ್ಲಿನ ಕಾವ್ಯತತ್ತ್ವಗಳಲ್ಲಿ ಧ್ವನಿಗೆ, ರಸಧ್ವನಿಗೆ ಅಗ್ರಸ್ಥಾನವಿದೆ.

ಧ್ವನಿಪ್ರಸ್ತಾನದಲ್ಲಿ 'ಧ್ವನಿ' ಶಬ್ದವನ್ನು ಐದು ಬೇರೆ ಬೇರೆ ಅರ್ಥಗಳಲ್ಲಿ ಬಳಸಲಾಗುತ್ತದೆಂದು ಆನಂದವರ್ಧನನು ಸೂಚಿಸಿದ್ದಾನೆ. ವ್ಯಂಜನಾವೃತ್ತಿ, ವ್ಯಂಜನೆಯಿಂದ ತೋರಿಬರುವ ಅರ್ಥ, ಅಂತಹ ಅರ್ಥವುಳ್ಳ ಕಾವ್ಯ ಮುಂತಾಗಿ ಧ್ವನಿಕಾವ್ಯಲಕ್ಷಣದಲ್ಲಿ ವ್ಯಂಜನಾವೃತ್ತಿ ಮತ್ತು ವ್ಯಂಜನೆಯಿಂದ ಹೊಳೆಯುವ ಅರ್ಥವುಳ್ಳ ಕಾವ್ಯ ಇವೆರಡನ್ನು ಗುರಿಯಾಗಿಟ್ಟು ಧ್ವನಿ ಶಬ್ದವನ್ನು ಬಳಸಿದಂತಿದೆ. ಧ್ವನಿಕಾವ್ಯ ಲಕ್ಷಣಕಾರಿಕೆ ಹೀಗಿದೆ:

ಯತ್ರಾರ್ಥಃ ಶಬ್ದೋ ವಾ ತಮರ್ಥಮುಪಸರ್ಜನೀಕೃತಸ್ವಾರ್ಥೌ
ವ್ಯಂಕ್ತಃ ಕಾವ್ಯವಿಶೇಷಃ ಸ ಧ್ವನಿರಿತಿ ಸೂರಿಭಿಃ ಕಥಿತಃ ॥

–ಧ್ವನ್ಯಾಲೋಕಃ ೧–೧೩

"ಎಲ್ಲಿ ಅರ್ಥವಾಗಲಿ ಶಬ್ದವಾಗಲಿ (ಅನುಕ್ರಮವಾಗಿ) ತನ್ನ ಅರ್ಥವನ್ನು ಅಪ್ರಧಾನವಾಗಿರಿಸಿಕೊಂಡು ಆ ವ್ಯಂಗ್ಯಾರ್ಥವನ್ನು ಸೂಚಿಸುವುದೋ ಆ ಕಾವ್ಯವಿಶೇಷವನ್ನು ಪಂಡಿತರು "ಧ್ವನಿ"ಯೆಂದು ಕರೆಯುತ್ತಾರೆ."

–ಡಾ. ಕೆ. ಕೃಷ್ಣಮೂರ್ತಿ, ಕನ್ನಡ ಧ್ವನ್ಯಾಲೋಕ, ಪುಟ ೨೬

ಈ ಕಾರಿಕೆಯಲ್ಲಿ **ಅರ್ಥ, ಶಬ್ದ, ಧ್ವನಿ** ಎಂಬೀ ಮೂರು ನುಡಿಗಳು ಕಂಡುಬರುತ್ತವೆ. ಅಗ್ನಿಪುರಾಣದಲ್ಲಿರುವ ಕಾವ್ಯಮೀಮಾಂಸಾ ಭಾಗವು ಪ್ರಕ್ಷಿಪ್ತವೆನ್ನಲಾಗಿದೆ. ಆ ಪ್ರಕ್ಷಿಪ್ತ ಭಾಗದಲ್ಲಿ ಆಕ್ಷೇಪರೂಪ ಧ್ವನಿಯ ಪ್ರಸ್ತಾಪ ಕಂಡುಬರುತ್ತದೆ. ಈ ಪ್ರಕ್ಷಿಪ್ತ ಭಾಗದ ಕಾಲ ಕ್ರಿಸ್ತಶಕ ೮೦೦–೧೪೦೦ ಎಂದು ಊಹಿಸುತ್ತಾರೆ. ಧ್ವನ್ಯಾಲೋಕ ರಚನೆಯ ಕಾಲ ಕ್ರಿಸ್ತಶಕ ೮೭೦–೯೦೧. ಅಗ್ನಿಪುರಾಣದ ಧ್ವನಿಕಾರಿಕೆ ಹೀಗಿದೆ :

ಶ್ರುತೇರಲಭ್ಯಮಾನೋಽರ್ಥಃ ಯಸ್ಮಾದ್ ಭಾತಿ ಸಚೇತಸಾಮ್ ।
ಸ ಆಕ್ಷೇಪೋ ಧ್ವನಿಃ ಸ್ಯಾಚ್ಚ ಧ್ವನಿನಾ ವ್ಯಜ್ಯತೇ ಯತಃ ॥
ಶಬ್ದೇನಾರ್ಥೇನ ಯತ್ರಾರ್ಥಃ ಕೃತ್ವಾ ಸ್ವಮುಪಸರ್ಜನಮ್ ।

ಧ್ವನಿಕಾವ್ಯಲಕ್ಷಣಕಾರಿಕೆಯ ಹಿನ್ನೆಲೆಯಲ್ಲೇ ಇದನ್ನು ಗ್ರಹಿಸಬಹುದು. ಇಲ್ಲೂ ಕೂಡ **ಧ್ವನಿ, ಶಬ್ದ, ಅರ್ಥ** ಎಂಬೀ ಶಬ್ದವಿಶೇಷ ಸಂನಿವೇಶರೂಪದ ಅರ್ಥ ವಿಶೇಷಸ್ಮಾರಕವಾದ **ಸಾಹಚರ್ಯ**ವೆಂಬ ಸುಳುಹು, ಕೈಮರವನ್ನು ಗುರುತಿಸಬಹುದು.

ಸಂಯೋಗೋ ವಿಪ್ರಯೋಗಶ್ಚ ಸಾಹಚರ್ಯಂ ವಿರೋಧಿತಾ ।... ...
ಶಬ್ದಾರ್ಥಸ್ಯಾನವಚ್ಛೇದೇ ವಿಶೇಷಸ್ಮೃತಿ ಹೇತವಃ ॥

ಇದು ಭಾರತೀಯ ಕಾವ್ಯಮೀಮಾಂಸೆಯಲ್ಲಿನ ಒಂದು ಪ್ರಕ್ರಿಯೆ. ತೀ.ನಂ.ಶ್ರೀ ಅವರ ಭಾರತೀಯ ಕಾವ್ಯಮೀಮಾಂಸೆಯಲ್ಲೂ ಇದು ನಮೂದಾಗಿದೆ. ಶಬ್ದ ಅರ್ಥ

ಹಾಗೂ ಸಂದಾರ್ಭವಿಶೇಷದ ಹೊಂದಾಣಿಕೆ ಕಂಡುಬರುವಂತಹ ಸ್ಥಳಗಳಲ್ಲಿ ಈ ಸುಳುಹುಗಳನ್ನು ಅನ್ವಯಿಸಿ ತಾಳೆ ನೋಡಿ ಸಾಮ್ಯ, ಹೋಲಿಕೆ ಕೂಡಿಬಂದಲ್ಲಿ ಆ ಮೂಲಕ ಅರ್ಥವಿಶೇಷವನ್ನು ಕಂಡುಕೊಳ್ಳಬಹುದು. ಹೀಗೆ ಸಂದಿಗ್ಧಾರ್ಥ ಸ್ಥಳದಲ್ಲಿ ಅರ್ಥವಿಶೇಷ ನಿರ್ಣಯಕ್ಕೆ ಈ ಸುಳುಹುಗಳು ಸಹಕಾರಿಯಾಗುತ್ತವೆಯೆಂದು ಶಾಸ್ತ್ರಕಾರರು ಹೇಳಿದ್ದಾರೆ. ಧ್ವನಿಕಂದದಲ್ಲಿ ಮಾನ್ಯ ವಿದ್ವಾಂಸರೇಕರು ಇದುವರೆಗೆ (೧೯೩೦-೨೦೧೫) ಕಂಡುಕೊಂಡ ಅರ್ಥದ ಬಗೆಗೆ ವಿಚಿಕಿತ್ಸೆಯುಂಟಾದುದರಿಂದ ಅದನ್ನು ಬಗೆಹರಿಸಿಕೊಳ್ಳುವ ಉದ್ದೇಶದಿಂದ ಈ ಮೂಲಕ ವಿದ್ವಾಂಸರೆದುರು ನಿವೇದಿಸಿಕೊಳ್ಳುತ್ತಿದ್ದೇನೆ. ಧ್ವನಿಕಂದದ ಸಂದರ್ಭಕ್ಕಿದು ಪೀಠಿಕೆ. ಮುಂದಿನದು ಧ್ವನಿಕಂದ.

ಶ್ರೀವಿಜಯನ ಕವಿರಾಜಮಾರ್ಗ ಹಾಗೂ ಆನಂದವರ್ಧನನ ಸಂಸ್ಕೃತ ಧ್ವನ್ಯಾಲೋಕ ಇವೆರಡೂ ಕ್ರಿಸ್ತಶಕ ಸರಿಸುಮಾರು ೮೭೦-೮೮೦ರ ಅವಧಿಯಲ್ಲಿ ರಚಿತವಾಗಿರಬಹುದು. ಕವಿರಾಜಮಾರ್ಗವು ಇನ್ನೂ ಸ್ವಲ್ಪ ಮುಂಚೆಯೇ ರಚಿತವಾಗಿರಬಹುದೇನೋ ! ಧ್ವನ್ಯಾಲೋಕವು ಲೋಕಾರ್ಪಣೆಯಾಗಿ ಪ್ರಚಾರಕ್ಕೆ ಬಂದುದು ಮಾತ್ರ ಇಸ್ವಿ ೯೦೧ರ ಹಾಗೆ ಎಂಬುದು ವಿದ್ವಾಂಸರ ಅಭಿಪ್ರಾಯ. ಧ್ವನ್ಯಾಲೋಕವೇ ಧ್ವನಿಯ ಕುರಿತಾದ ಮೊದಲ ಗ್ರಂಥ. ಧ್ವನಿಯೆಂಬ ಕಾವ್ಯತತ್ತ್ವವನ್ನು, ವ್ಯಂಜನಾ ವೃತ್ತಿಯನ್ನು ಆನಂದವರ್ಧನನೇ ಕಂಡುಹಿಡಿದವನು. ಆದ್ದರಿಂದ ಧ್ವನ್ಯಾಲೋಕ ಗ್ರಂಥವು ಪ್ರಚಾರಕ್ಕೆ ಬರುವ ಮೊದಲು ಕಾವ್ಯಮೀಮಾಂಸಕ ವಿದ್ವಾಂಸರ ಗೋಷ್ಠಿಯಲ್ಲಿ ಕಾವ್ಯತತ್ತ್ವ ಧ್ವನಿಯ ಚರ್ಚೆ ಕೇಳಿಬರಲು ಅವಕಾಶವೇ ಇಲ್ಲ ಎಂಬುದು ವಿದ್ವಾಂಸರಲ್ಲಿ ಕೆಲವರ ಆಶಯ. ಧ್ವನಿಯೆಂಬುದು ಆನಂದವರ್ಧನನಿಗಿಂತ ಹಿಂದಿನಿಂದಲೂ ವಿದ್ವಾಂಸರಿಗೆ ಪರಿಚಿತವೇ ಆಗಿತ್ತು. ಧ್ವನಿಯ ಆವಿಷ್ಕಾರಕ್ಕೆ ಸುಳುಹು ಪ್ರೇರಣೆ ಸಿಕ್ಕಿದ್ದು ವೈಯಾಕರಣರ ಸ್ಫೋಟ ಪ್ರಕ್ರಿಯೆಯಿಂದ. ಕಾವ್ಯಮೀಮಾಂಸಾ ಕ್ಷೇತ್ರದಲ್ಲಿ ಆನಂದವರ್ಧನನವರೆಗೂ ಧ್ವನಿಯ ಸ್ವರೂಪ ಅಸ್ಪಷ್ಟವಾಗಿತ್ತು. ಧ್ವನ್ಯಾಲೋಕ ಗ್ರಂಥರಚನೆಯ ಮೂಲಕ ಆನಂದವರ್ಧನನು ತನ್ನ ಪಾಂಡಿತ್ಯ ಪ್ರತಿಭೆ ನಿಪುಣತೆ ಶಕ್ತಿಗಳ ಮೇರೆಗೆ ಕಲ್ಲನ್ನು ಕಡೆದು ಕೆತ್ತಿ ಸುಂದರವಾದೊಂದು ಸರಸ್ವತೀ ವಿಗ್ರಹವನ್ನು ತಯಾರಿಸಿದ ಹಾಗೆ ಭಾರತೀಯ ಕಾವ್ಯಮೀಮಾಂಸಾ ಕ್ಷೇತ್ರದಲ್ಲೊಂದು ಶಾಶ್ವತವಾದ ಸುಂದರ ಧ್ವನಿಶಿಲ್ಪವನ್ನು ರೂಪಿಸಿ ಪ್ರತಿಷ್ಠಾಪಿಸಿದ್ದಾನೆ. ಅಲ್ಲಿ ಇಲ್ಲಿ ಕೇಳಿಬರುತ್ತಿದ್ದ ಧ್ವನಿಯೆಂಬುದು ಧ್ವನ್ಯಾಲೋಕದ ಪ್ರಸಾರದಿಂದಾಗಿ ಕಾವ್ಯಮೀಮಾಂಸಾ ಕ್ಷೇತ್ರದಲ್ಲಿ ಸಾರ್ವತ್ರಿಕವಾಯಿತು ಎಂಬುದಾಗಿ ಇನ್ನು ಕೆಲ ವಿದ್ವಾಂಸರು ಹೇಳುತ್ತಾರೆ. "ಯಾರು ಏನೆಂದು ವಾದಿಸಿದರೂ ಧ್ವನ್ಯಾಲೋಕಕ್ಕೆ ಮುಂಚೆ ಕಾವ್ಯಲಕ್ಷಣ ಪ್ರಕ್ರಿಯೆಯಾದ 'ಧ್ವನಿ' ಸಮಾಮ್ನಾತಪೂರ್ವವಾಗಿದ್ದುದಕ್ಕೆ ಒಂದೇ ಒಂದು ಆಧಾರವೂ ಸಿಕ್ಕಿಲ್ಲ" ಎಂಬುದಾಗಿ ಮಾನ್ಯ ಡಾ. ಕೆ. ಕೃಷ್ಣಮೂರ್ತಿ ಅವರು ಹೇಳುತ್ತಾರೆ. ಆಧುನಿಕ ಸಂಶೋಧನೆ ಪ್ರಕಾರ "ಧ್ವನಿಃ ಸಮಾಮ್ನಾತಪೂರ್ವಃ" ಎಂಬೀ ಆನಂದವರ್ಧನನ ಮಾತಿಗೆ ಆಧಾರ ಸಿಕ್ಕಿಲ್ಲವೆಂಬೀ ಹೇಳಿಕೆಯನ್ನು ಒಪ್ಪಲೇಬೇಕು. ಜೊತೆಯಲ್ಲೇ ನಮ್ಮ ಪ್ರಾಚೀನ ಶಾಸ್ತ್ರ ಸಂಪ್ರದಾಯದ ಪ್ರಕಾರ ಆನಂದವರ್ಧನನ "ಧ್ವನಿಃ ಸಮಾಮ್ನಾತಪೂರ್ವಃ" ಎಂಬುದಕ್ಕೂ ಅರ್ಥ ಹೇಳಬೇಕು. ಮ್ನಾಧಾತುವು ಗುರುಶಿಷ್ಯ ಪರಂಪರೆಯ ಅಧ್ಯಯನ

ಅಧ್ಯಾಪನವನ್ನು ಹೇಳುತ್ತದಂತೆ. ಪೂರ್ವಂ ಸಮಾಮ್ನಾತಃ ಸಮಾಮ್ನಾತಪೂರ್ವಃ ಎಂಬುದಿಲ್ಲಿ ವಿಗ್ರಹ ಸಮಾಸಗಳು. ಹಿಂದಿನಿಂದಲೂ "ಧ್ವನಿ" ಅಭ್ಯಾಸಕ್ಕೆ ವಿಷಯವಾಗಿತ್ತು ಎಂದು ಅರ್ಥ. ಎಷ್ಟು ಕಾಲ ಹಿಂದಿನಿಂದ ಎಂಬುದನ್ನು ಮಾತ್ರ ನಿಗದಿಯಾಗಿ ಹೇಳಲಾಗುವುದಿಲ್ಲ. ಧ್ವನಿಯ ಚರ್ಚೆ ಹಿಂದಿನಿಂದ ಇತ್ತು ಆದರೆ ಗ್ರಂಥರಚನೆ ಆಗಿರಲಿಲ್ಲ ಎಂಬುದಾಗಿ ಲೋಚನದಲ್ಲಿ ಅಭಿನವಗುಪ್ತರೂ ಹೇಳುತ್ತಾರೆ. ಎಷ್ಟು ಹಿಂದಿನಿಂದ ಎಂಬುದನ್ನು ಅವರೂ ಹೇಳಲಿಲ್ಲ. ಆನಂದವರ್ಧನ ಅಭಿನವಗುಪ್ತರ ವಚನ ಪ್ರಾಮಾಣ್ಯದ ಮೇರೆಗೆ ಆನಂದವರ್ಧನನಿಗಿಂತ ಕೆಲವು ವರ್ಷಗಳಷ್ಟು ಹಿಂದಿನಿಂದ ಎಂದಿಷ್ಟು ಮಾತ್ರ ಹೇಳಬಹುದು. ಕರ್ಣಾಕರ್ಣಿಕೆಯ ರೂಪದಲ್ಲಿ ಅಥವಾ ಬಾಯಿಯಿಂದ ಬಾಯಿಗೆ ಎಂಬ ಮಾಧ್ಯಮದ ಮೂಲಕ ಕಾಶ್ಮೀರದಿಂದ ಕರ್ಣಾಟಕಕ್ಕೆ ಹರಿದುಬರಲು ತಗಲುವಷ್ಟು ವರ್ಷಗಳಷ್ಟು ಹಿಂದಿನಿಂದಲೂ ಧ್ವನಿಯ ಚರ್ಚೆ ಆರಂಭವಾಗಿತ್ತು ಎಂದಿಷ್ಟು ಮಾತ್ರ ಕಾಲವನ್ನು ನಿಗದಿಯಾಗಿ ಊಹಿಸಬಹುದು. ಧ್ವನಿಕಾವ್ಯ ಲಕ್ಷಣಕಾರಿಕೆಯನ್ನು ಮಾರ್ಗಕಾರನು ಕಂಡೋ ಕೇಳಿಯೋ ತಿಳಿದಿದ್ದ ಎಂಬುದುದಿಲ್ಲಿ ನನ್ನ ವೈಯಕ್ತಿಕ ಅನಿಸಿಕೆ.

ಕವಿರಾಜಮಾರ್ಗದಲ್ಲಿ ಧ್ವನಿಕಂದ ಹೀಗಿದೆ :

ಧ್ವನಿಯೆಂಬುದಳಂಕಾರಂ<br>
ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ ।<br>
ನೆನೆವುದಿದನಿಂತು ಕಮಲದೊಳ್<br>
ಅನಿಮಿಷಯುಗಮೊಪ್ಪಿತೋರ್ಪುದಿಂತಿದು ಚೋದ್ಯಂ ॥

ಕರಾಮಾ ೩–೨೧೯

ಧ್ವನಿಕಾವ್ಯ ಲಕ್ಷಣದಲ್ಲಿರುವಂತೆಯೇ ಇದರಲ್ಲಿಯೂ ಕೂಡ ಧ್ವನಿ, ಶಬ್ದ, ಅರ್ಥ ಎಂಬೀ ಮೂರು ನುಡಿಗಳ ಹೆಣಿಗೆ ಕಂಡುಬರುತ್ತದೆ. ಶಬ್ದವಿಶೇಷ ಸಂನಿವೇಶರೂಪದ ಅರ್ಥವಿಶೇಷ ಸ್ಮಾರಕವಾಗುವ ಸಾಹಚರ್ಯವೆಂಬ ಸುಳುಹನ್ನು ಹಿಂಬಾಲಿಸಿ ಹೋದಾಗ ಇದೇ ಬಗೆಯ ನುಡಿಹೆಣಿಗೆಯುಳ್ಳ ಧ್ವನಿಕಾವ್ಯಲಕ್ಷಣವೇ ನಮಗೆ ಎದುರಾದೀತು. ಇದೇ ಬಗೆಯ ನುಡಿಹೆಣಿಗೆಯ ಇನ್ನಾವುದಾದರೂ ವಾಕ್ಯವು ಇದೆಯೋ ಇಲ್ಲವೋ ಎಂಬುದನ್ನು ಮಾರ್ಗಕಾರನು ಧ್ವನಿಕಾವ್ಯಲಕ್ಷಣವನ್ನು ನೆನಪಿಸಿಕೊಂಡುದರಿಂದಲೇ ಗ್ರಂಥಾಂತ್ಯದಲ್ಲಿ ಪ್ರಾಸಂಗಿಕವಾಗಿ ಧ್ವನಿಕಾವ್ಯ ಲಕ್ಷಣಕ್ಕೆ ನೇರ ಪ್ರತಿಕ್ರಿಯೆಯ ರೂಪದಲ್ಲಿ ಧ್ವನಿಕಂದವನ್ನು ರಚಿಸಿ ಸೇರಿಸಿದ್ದಾನೆ. ಮಾರ್ಗಕಾರನಿಗೆ ತನ್ನ ಪ್ರಕೃತ ಗ್ರಂಥಕ್ಕೆ ಧ್ವನಿಯು ವಿಷಯವಲ್ಲ. ಅಲ್ಲದೇ ಅವನಿಗೆ ಧ್ವನಿ ಪ್ರಕ್ರಿಯೆಯ ಸಮಗ್ರ ಪರಿಚಯವೂ ಆಗಿರಲಿಲ್ಲ. ಧ್ವನಿಕಾವ್ಯಲಕ್ಷಣದಿಂದ ತಿಳಿದುಬಂದುದರ ಮಟ್ಟಿಗಷ್ಟೇ ಅವನ ಪ್ರತಿಕ್ರಿಯೆಯೂ ಸೀಮಿತವಾಗಿದೆ. ಧ್ವನಿಕಾವ್ಯಲಕ್ಷಣವನ್ನೂ ಕೇಳಿ ತಿಳಿಯದಿದ್ದವನು ಯಾರೂ ಕೂಡ ಕೇವಲ ಧ್ವನಿಯೆಂಬೊಂದು ಕಾವ್ಯಕ್ಕೆ ಸಂಬಂಧಿಸಿದ ತತ್ತ್ವವನ್ನು ಯಾರೋ ಹೇಳುತ್ತಿದ್ದಾರಂತೆ ಎಂದಿಷ್ಟನ್ನು ಮಾತ್ರ ಕೇಳಿಸಿಕೊಂಡವನು–ಈ ಮೇಲಿನ ಕಂದವನ್ನು

ರಚಿಸಲು ಸಾಧ್ಯವಿಲ್ಲ. "ಅರ್ಥಂ ಬುದ್ಧ್ವಾ ಶಬ್ದರಚನಾ" ಎಂಬ ಮಾತನ್ನಿಲ್ಲಿ ನೆನಪಿಸಿಕೊಳ್ಳಬಹುದು. ಧ್ವನಿಕಾವ್ಯ ಲಕ್ಷಣದ ಬದಲಾಗಿ ಧ್ವನಿಯೆಂಬೊಂದು ಕಾವ್ಯತತ್ತ್ವವನ್ನು ಯಾರೋ ಹೇಳುತ್ತಿದ್ದಾರಂತೆ ಎಂಬುದಿಷ್ಟನ್ನು ಮಾತ್ರ ಕೇಳಿಸಿಕೊಂಡವನು ಧ್ವನಿಕಾವ್ಯ ಲಕ್ಷಣದಲ್ಲಿರುವ ಶಬ್ದ ಅರ್ಥ ಎಂಬೀ ಎರಡು ನುಡಿಗಳನ್ನು ಕಂದದಲ್ಲಿ ಹೆಣೆದದ್ದು ಹೇಗೆ? 'ಧ್ವನಿ' ಎಂಬ ಕಾವ್ಯತತ್ತ್ವಕ್ಕೆ ಶಬ್ದ ಅರ್ಥ ಎಂಬ ಈ ಎರಡೂ ವಸ್ತುಗಳು ಸಂಬಂಧಿಸುತ್ತವೆ ಅವು ಧ್ವನಿಯ ಖಾಸಾ ನೆಂಟರು. ಆದ್ದರಿಂದ ಅವೆರಡಕ್ಕೂ ಕೂಡ ಧ್ವನಿಕಂದದಲ್ಲಿ ಮಣೆ ಹಾಕಲೇಬೇಕೆಂದು ಶ್ರೀವಿಜಯನಿಗೆ ಹೇಳಿದ್ದು ಯಾರು? ಕಾಕತಾಳೀಯ ಎಂಬುದಿಲ್ಲಿ ಶಾಸ್ತ್ರಪರಿಧಿಯೊಳಗಿನ ಮಾತಾಗುವುದಿಲ್ಲ. ಶ್ರೀವಿಜಯನಂತಹ ಲಾಕ್ಷಣಿಕನೊಬ್ಬನು 'ಬುಡ'ವಿಲ್ಲದೇ ಉಡಾಫೆಯ ಮಾತನ್ನು ಶಾಸ್ತ್ರಗ್ರಂಥದಲ್ಲಿ ಸೇರಿಸುವುದೂ ಇಲ್ಲ. ದಂಡಿಯ ಕಾವ್ಯಾದರ್ಶಕ್ಕೆ ವ್ಯಾಖ್ಯಾನವನ್ನು ರಚಿಸಿದ ರತ್ನಶ್ರೀಜ್ಞಾನನೆಂಬ ಬೌದ್ಧ ವಿದ್ವಾಂಸನು ರಾಷ್ಟ್ರಕೂಟ ತುಂಗನರಾಧಿಪನ ಆಶ್ರಯದಲ್ಲಿದ್ದನಂತೆ. ಇವನು ಶ್ರೀವಿಜಯನಿಗಿಂತ ಸ್ವಲ್ಪ ಮುಂದಿನವನು (ಇಸ್ವಿ ೯೩೦). ರತ್ನಶ್ರೀಜ್ಞಾನನೂ ಕೂಡ ಧ್ವನಿಕಾವ್ಯ ಲಕ್ಷಣಕಾರಿಕೆಯನ್ನು ಮಾತ್ರ ಕಂಡು ಕೇಳಿ ತಿಳಿದಿದ್ದನೆಂದು ತೋರುತ್ತದೆ. ಕಾವ್ಯಾದರ್ಶದ ರತ್ನಶ್ರೀ ವ್ಯಾಖ್ಯಾನದ ಸಮಾಸೋಕ್ತಿ ಪ್ರಕರಣದಲ್ಲಿ ಅವನು "ಇಯಮೇವ ಚಾನ್ಯೈಃ ಧ್ವನಿರಿತಿ ವ್ಯವಹ್ರಿಯತೇ । ಯಥಾ ಯತ್ರಾರ್ಥಃ ಶಬ್ದೋ....ಧ್ವನಿಕಾರಿಕಾಯಾಮ್ ।" ಎಂಬುದಾಗಿ ಉಲ್ಲೇಖಿಸಿದ್ದಾನೆ.

ಧ್ವನಿಕಂದದಲ್ಲಿ ಅಂತರ್ಭಾವವಾದ ಹಾಗೂ ವ್ಯಂಜನಾವೃತ್ತಿಯ ನಿರಾಕಾರಣೆ ಇವೆರಡು ಅಂಶಗಳು ಮಾರ್ಗಕಾರನ ವಿವಕ್ಷೆಯೆಂಬುದು ನನ್ನ ಅನಿಸಿಕೆ. ಉದ್ದೇಶ್ಯ ವಚನಂ ಪೂರ್ವಂ ವಿಧೇಯಸ್ಯ ತತಃ ಪರಮ್ । ಉದ್ದೇಶ್ಯವಾದದ್ದರ ಕುರಿತು ವಕ್ತೃವಿಗೆ ಸಾಮಾನ್ಯ ಜ್ಞಾನವಾದರೂ ಇರಬೇಕು. ಇಲ್ಲಿ ಧ್ವನಿಯನ್ನು ಉದ್ದೇಶಿಸಿ ಅಲಂಕಾರತ್ವವನ್ನು ಶ್ರೀವಿಜಯನು ವಿಧಿಸುತ್ತಿದ್ದಾನೆ. ಅಲಂಕಾರಂ ಎಂಬಲ್ಲಿ ಜಾತ್ಯೇಕವಚನ ಪ್ರಯೋಗವಿದೆ. ಅತಿಶಯೋಕ್ತಿ ಮುಂತಾಗಿ ಈ ಹಿಂದೆ ನಿರೂಪಿತವಾದ ಬೇರೆ ಬೇರೆ ಅಲಂಕಾರಗಳು ಎಂದರ್ಥ. ಧ್ವನಿಯಿಸುಗುಂ ಶಬ್ದದಿಂದಂ – ಅರ್ಥದಿಂದ ಇನ್ನೊಂದರ್ಥ ಧ್ವನಿಯಿಸುವುದಿಲ್ಲ. ಇದು ಲಾಕ್ಷಣಿಕ ಪರಿಸಂಖ್ಯಾಪ್ರಯೋಗ. ವಾಕ್ಯದಲ್ಲಿ ಪ್ರಯೋಗಿಸಿದ ಶಬ್ದಗಳಿಂದ ತೋರದೇ ಇರುವ, ಆದರೆ ಇನ್ನಾವುದೋ ಬಗೆಯಲ್ಲಿ ಆ ವಾಕ್ಯದ ಓದುಗನಿಗೆ ತಿಳಿದೇ ಇರುವ ಇನ್ನೊಂದರ್ಥದ ನಿಷೇಧವೇ ಪರಿಸಂಖ್ಯೆಯ ವಿವಕ್ಷೆ. ಪ್ರಯೋಗಿಸಿರುವ ಶಬ್ದದಿಂದ ತಿಳಿದುಬರುವ ಅರ್ಥಕ್ಕೆ ವಿವಕ್ಷೆಯಿಲ್ಲ. ಅದು ಇನ್ನಾವುದೋ ಮೂಲದಿಂದ ಈ ಮೊದಲೇ ಜ್ಞಾತವೇ ಆಗಿರುತ್ತದೆ. ತಿಳಿದೇ ಇರುತ್ತದೆಂದರ್ಥ. ಯಾವುದೋ ಮೂಲವೆಂದರೆ ಶಾಸ್ತ್ರ ಅಥವಾ ಲೋಕವ್ಯವಹಾರದಿಂದ ಎಂದರ್ಥ. ಧ್ವನಿಯಿಸುಗುಂ ಶಬ್ದದಿಂದಂ ಎಂಬಲ್ಲಿ:

> ನ ಸೋऽಸ್ತಿ ಪ್ರತ್ಯಯೋ ಲೋಕೇ ಯಃ ಶಬ್ದಾನುಗಮಾದ್ ಯತೇ ।
> ಅನುವಿದ್ಧಮಿವ ಜ್ಞಾನಂ ಸರ್ವಂ ಶಬ್ದೇನ ಭಾಸತೇ ॥ ವಾಕ್ಯಪದೀಯಮ್

"ಶಬ್ದಸಂಸ್ಪರ್ಶವಿಲ್ಲದ ಯಾವುದೇ ಒಂದು ಜ್ಞಾನವೂ ಲೋಕದಲ್ಲಿಲ್ಲ. ಸಮಸ್ತ ಜ್ಞಾನವೂ ಶಬ್ದದೊಂದಿಗೆ ಕೂಡಿ ಹೋಗಿದೆಯೋ ಎಂಬಂತೆಯೇ ತೋರುತ್ತದೆ."

–ವಿದ್ವಾನ್ ಎನ್. ರಂಗನಾಥ ಶರ್ಮಾ

(ವಾಕ್ಯಪದೀಯ, ಬ್ರಹ್ಮಕಾಂಡ, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಪ್ರಕಟನೆ)

ಈ ವಾಕ್ಯ ಹಾಗೂ ಲೋಕವ್ಯವಹಾರದಿಂದಾಗಿ ಮಾರ್ಗಕಾರನು ಧ್ವನಿಯಿಸುಗುಂ ಶಬ್ದದಿಂದಂ ಎಂಬುದಾಗಿ ಹೇಳುತ್ತಿದ್ದಾನೆ. "ಅರ್ಥಃ ತಮರ್ಥಂ ವ್ಯಕ್ತಿ" ಎಂಬುದು ಧ್ವನಿಕಾವ್ಯ ಲಕ್ಷಣದ ಮೂಲಕ ಮಾರ್ಗಕಾರನಿಗೆ ಇತ್ತೀಚೆಗಷ್ಟೇ ಗೊತ್ತಾದುದು! ಹಾಗಾಗಿ ಅವನಿಗಿದು ಶಾಸ್ತ್ರ ಹಾಗೂ ಲೋಕವಿರುದ್ಧವೆನಿಸಿತು. **ಧ್ವನಿಯಿಸುಗುಂ ಶಬ್ದದಿಂದಂ ಎಂದು ಗುಡುಗಿದ!**

ಪೂರ್ವೋತ್ತರ ಮೀಮಾಂಸಾ ಶಾಸ್ತ್ರಗಳು ಹಾಗೂ ಧರ್ಮಶಾಸ್ತ್ರಗಳಲ್ಲಿ ಪರಿಸಂಖ್ಯಾ ವಿಧಿಯ ಪ್ರಯೋಗಗಳು ಹೆಚ್ಚಾಗಿ ಕಂಡುಬರುತ್ತವೆ. ಉಳಿದೆಡೆಗಳಲ್ಲಿ ಕ್ವಚಿತ್ತಾಗಿ ಎಂದು ಹೇಳುತ್ತಾರೆ. ಅಂತೆಯೇ ಆ ಶಾಸ್ತ್ರಗಳ ಪರಿಚಯವುಳ್ಳವರಿಗೆ ಮಾತ್ರವೇ ಪರಿಸಂಖ್ಯೆಯು ಸ್ಫುರಿಸಬಹುದೇ ಹೊರತು ಕವಿರಾಜಮಾರ್ಗದಂತಹ ಕಾವ್ಯಮೀಮಾಂಸಾ ಗ್ರಂಥದ ಸಂದರ್ಭದಲ್ಲಿ ಪರಿಸಂಖ್ಯೆಯಿದೆಯೆಂಬುದಾಗಿ ಉಂತೆ ಬೊಬ್ಬೆ ಹಬ್ಬಿಸಬೇಡ ಎಂಬುದಾಗಿ ಉದಾಸೀನ ಮಧ್ಯಸ್ಥರು ಸಲಹೆ ನೀಡಿದ್ದಾರೆ. ನಿಜ, ಎಲ್ಲೆಂದರಲ್ಲಿ ಪರಿಸಂಖ್ಯೆಯನ್ನು ಹೇಳಲಿಕ್ಕಾಗುವುದಿಲ್ಲ. ಅದೂ ಅಲ್ಲದೇ ನನ್ನಂತಹ ಸಾಮಾನ್ಯನಿಗೆ ಪರಿಸಂಖ್ಯಾ ಪಂಕ್ತಿಯ ವಿವಕ್ಷಿತಾರ್ಥವು ಸ್ಫುರಿಸುವುದೇ ಇಲ್ಲ. ಪ್ರಕೃತದಲ್ಲಿ ಇಲ್ಲದ ಪರಿಸಂಖ್ಯೆಯನ್ನು ನಾನು ಪ್ರಕ್ಷೇಪ ಮಾಡುತ್ತಿಲ್ಲ. ಬೇರೆಡೆಗಳಲ್ಲಿರುವ ಅದೆಷ್ಟೋ ಪರಿಸಂಖ್ಯೆಗಳ ಉದಾಹರಣೆಗಳಿಗಿಂತಲೂ ಶೀಘ್ರ ಹಾಗೂ ಸ್ಪಷ್ಟ ಸ್ಫುರಣೆಯ ಅಪರೂಪದ ಪರಿಸಂಖ್ಯೆಯ ಉದಾಹರಣೆಯೇ ಧ್ವನಿಕಂದದದಲ್ಲಿದೆಯೆಂಬುದು ನನ್ನ ವಿಶ್ವಾಸ. ಹೇಗೆಂದರೆ :

ವಾಚ್ಯವಾಚಕಯೋರ್ಭೇದೋ ನಾತ್ಯಂತಂ ವಿಜ್ಯತೇ ಕ್ವಚಿತ್ ।<br>
ವಾಗರ್ಥಾವಿವ ಸಂಪೃಕ್ತೌ ಪಾರ್ವತೀಪರಮೇಶ್ವರೌ ॥

ಶಬ್ದ ಅರ್ಥ ಎಂಬಿವೆರಡೂ ಒಂದಕ್ಕೊಂದು ಅಂಟಿಕೊಂಡೇ ಇರುವ, ಒಂದನ್ನುಳಿದು ಇನ್ನೊಂದು ಇರಲಾರದ, ಅವಿನಾಭಾವ ಸಂಬಂಧವುಳ್ಳ ಪದಾರ್ಥಗಳು ಎಂಬುದಾಗಿ ಶಾಸ್ತ್ರಕಾರರು ಹೇಳಿದ್ದಾರೆ. ಶಬ್ದ, ಅರ್ಥ, ಜ್ಞಾನ ಇವು ಮೂರೂ ಇಡಿಯಾಗಿ ಸ್ಫುರಿಸುತ್ತವೆ. ಬಿಡಿಯಾಗಿ ಅರಿವಿಗೆ ಬರುವುದಿಲ್ಲವೆನ್ನಲಾಗಿದೆ. 'ಧ್ವನಿಯಿಸುಗುಂ ಶಬ್ದದಿಂದಂ' ಎಂಬುದರ ಮರ್ಮವೇನು? ವಿವಕ್ಷೆಯೇನು? "ಅರ್ಥದಿಂದ ಧ್ವನಿಸುವದಿಲ್ಲ" ಎಂಬುದೇ ಅಲ್ಲವೇ ? ಶಬ್ದದಿಂದ ಎಂಬಲ್ಲಿ ಅರ್ಥದಿಂದ ಎಂಬುದೂ ಕೂಡ ಹಾಜರಾಗಲೇಬೇಕು. ಪರಿಸಂಖ್ಯಾ ಪರಿಭಾಷೆಯ ಪ್ರಕಾರ ನಿಷೇಧ ರೂಪದ ಅರ್ಥವನ್ನು ಹೇಳಬೇಕು. "ಅರ್ಥದಿಂದ ಧ್ವನಿಸುವುದಿಲ್ಲ."

ಪರಿಸಂಖ್ಯೆಯ ಪರಿಭಾಷೆಯೇನೆಂದರೆ ಪ್ರಯೋಗಿಸಿರುವ ಶಬ್ದಗಳ ಅರ್ಥಕ್ಕೆ ವಿವಕ್ಷೆಯಿಲ್ಲ. ಆ ಅರ್ಥವು ಅಲ್ಲಿ ಪ್ರಮಾಣಾಂತರದಿಂದ ಆಗಲೇ ಪ್ರಾಪ್ತ (ಜ್ಞಾತ) ವಾಗಿಯೇ ಇರುತ್ತದೆ. ವಾಕ್ಯದಲ್ಲಿರುವ ಶಬ್ದ (ಪದ) ಗಳಿಂದ ತೋರಿಬರದೇ ಇರುವ, ಆದರೂ ಪ್ರಕೃತಕ್ಕೆ ಸಂಬಂಧಿಸಿದ (ಅಂದರೆ ಆಕ್ಷಿಪ್ತವಾಗಿ ತಿಳಿದು ಬರುವ) ಅರ್ಥಕ್ಕೆ ನಿಷೇಧ ಹೇರುವಿಕೆ. "ಪಂಚ ಪಂಚನಖಾ ಭಕ್ಷ್ಯಾಃ" ಎಂಬೀ ವಾಕ್ಯವು ಪರಿಸಂಖ್ಯೆಯೊಂದರ ಉದಾಹರಣೆ. ಇಲ್ಲಿರುವ ಶಬ್ದಗಳಿಂದ ತೋರುವ ಅರ್ಥಕ್ಕೆ ವಿವಕ್ಷೆಯಿಲ್ಲ. ಮಾಂಸಾಹಾರಿಗಳು ಐದುಗುರಿನ ಈ ಹೇಳಿದ ಐದು ಪ್ರಾಣಿಗಳ ಮಾಂಸಗಳನ್ನು ತಿನ್ನಬೇಕು ಎಂಬಂತಹ ವಿಧಿರೂಪದ ಅರ್ಥಕ್ಕಿಲ್ಲಿ ವಿವಕ್ಷೆಯಿಲ್ಲ. ಮಾಂಸಭಕ್ಷಣವು ಅವರವರ ಇಚ್ಛಾನುಸಾರವಾಗಿ ಪ್ರಾಪ್ತವೇ ಆಗಿರುತ್ತದೆ. ಅದಕ್ಕೆ ವಿಧಿ ಬೇಕಾಗಿಲ್ಲ. ನಿಷೇಧಕ್ಕೆ ಶಾಸ್ತ್ರವೇ ಬೇಕು. ಇಲ್ಲಿ ಹೇಳಿದ ಹಾಗೂ ಹೇಳದೇ ಇರುವ ಐದುಗುರಿನ ಎಲ್ಲ ಪ್ರಾಣಿಗಳ ಮಾಂಸಭಕ್ಷಣೆಯಲ್ಲೂ ಮಾಂಸಾಹಾರಿಗಳು ತಮ್ಮ ತಮ್ಮ ಇಚ್ಛೆಗನುಗುಣವಾಗಿ ಪ್ರವೃತ್ತರಾಗಬಹುದು. ಆದ್ದರಿಂದ ಇಲ್ಲಿ ಹೆಸರಿಸಲಾದ ಐದುಗುರಿನ ಐದು ಪ್ರಾಣಿಗಳನ್ನುಳಿದು ಇಲ್ಲಿ ಹೆಸರಿಸದೇ ಇರುವ ಇನ್ನುಳಿದ ಐದುಗುರಿನ ಯಾವ ಪ್ರಾಣಿಯ ಮಾಂಸವನ್ನು ತಿನ್ನಕೂಡದು ಎಂಬಂತಹ ನಿಷೇಧರೂಪದ ಅರ್ಥಕ್ಕೆ ಇಲ್ಲಿ ವಿವಕ್ಷೆ ಎಂಬುದಾಗಿ ಶಾಸ್ತ್ರಕಾರರು ತೋರಿಸಿದ್ದಾರೆ. ಒಂದನ್ನುಳಿಸಿಕೊಂಡು ಇನ್ನೊಂದನ್ನು ಬದಿಗೆ ಸರಿಸುವುದೇ ಪರಿಸಂಖ್ಯೆ.

"ನಿಷೇಧಸ್ಯ ಪ್ರಾಪ್ತಿಪೂರ್ವಕತ್ವನಿಯಮಾತ್" ಎಂಬುದು ಶಾಸ್ತ್ರನಿಯಮ. "ಧ್ವನಿಯಿಸುಗುಂ ಶಬ್ದದಿಂದಂ" ಎಂಬಲ್ಲಿ ಮಾರ್ಗಕಾರನಿಗೆ "ಅರ್ಥದಿಂದ ಅರ್ಥಾಂತರ ಧ್ವನಿಸುವುದಿಲ್ಲ" ಎಂಬುದಾಗಿ ಅರ್ಥಧ್ವನನ ನಿಷೇಧಕ್ಕೆ ಮೊದಲು "ಅರ್ಥದಿಂದ ಅರ್ಥಾಂತರ ಧ್ವನಿಸುತ್ತದೆ" ಎಂಬಂತಹ ಅರ್ಥವು ಪ್ರಾಪ್ತವಾಗಿರಬೇಕು ಅಂದರೆ ತಿಳಿದಿರಬೇಕು. ಈ ಬಗೆಯ ಅರ್ಥವು ಮೊದಲ ಬಾರಿಗೆ ದಾಖಲಾದುದು ಧ್ವನಿಕಾವ್ಯಲಕ್ಷಣಕಾರಿಕೆಯಲ್ಲಿ. ಮಾರ್ಗಕಾರನು ಈ ಕಾರಿಕೆಯನ್ನು ನೋಡಿಲ್ಲ ಕೇಳಿಲ್ಲ ಎಂಬುದು ಸಂಶೋಧನೆಯಿಂದ ಸಾಬೀತಾದುದು ನಿಜವಾಗಿದ್ದರೆ, ಮಾರ್ಗಕಾರನು ನೋಡಿರಬಹುದಾದ, "ಅರ್ಥವೂ ಅರ್ಥಾಂತರವನ್ನು ಧ್ವನಿಸುತ್ತದೆ" ಎಂಬ ಅರ್ಥವನ್ನು ತಿಳಿಸುವ ಸಂಸ್ಕೃತ ಪ್ರಾಕೃತ ಅಥವಾ ಕನ್ನಡದ ಇನ್ನೊಂದು ವಾಕ್ಯವನ್ನು ಇಲ್ಲಿ ಉದಾಹರಿಸಬೇಕಾದ ಅಗತ್ಯವಿದೆ. ಧ್ವನಿಕಾವ್ಯಲಕ್ಷಣಕಾರಿಯಲ್ಲಾದರೋ "ಅರ್ಥಃ ತಮರ್ಥಂ ವ್ಯನಕ್ತಿ" ಎಂಬ ಮಾತು ಕಂಡುಬರುತ್ತದೆ. ಆ ಕಾರಿಕೆಯನ್ನು ಕಂಡು ಕೇಳಿ ತಿಳಿದ ನಂತರವೇ ಮಾರ್ಗಕಾರನು "ಧ್ವನಿಯಿಸುಗುಂ ಶಬ್ದದಿಂದಂ" ಎಂಬೀ ಅವಧಾರಣೆಯ ವಾಕ್ಯವನ್ನು ಹೇಳಿನೆಂಬುದು ನನ್ನ ಅನಿಸಿಕೆ. "ಅರ್ಥದೆ ದೂಷ್ಯಂ" ಎಂಬುದು "ಧ್ವನಿಯಿಸುಗುಂ ಶಬ್ದದಿಂದಂ" ಎಂಬುದರ ನಿಷೇಧಾರ್ಥದ ಸಮರ್ಥನೆ ಉಪೋದ್‌ಬಲಕ ಅಭ್ಯುಚ್ಚಯ ಅಷ್ಟೇ. (ವ್ಯಂಜನಾವೃತ್ತಿಯನ್ನು ನಿರಾಕರಿಸುವಾಗ ಮುಕುಲಭಟ್ಟನು ಮಾರ್ಗಕಾರನ ಮಾತನ್ನೇ ಅನುವಾದಿಸಿದಂತೆ ತೋರುತ್ತದೆ.)

"ಅರ್ಥದೆ ದೂಷ್ಯಂ" ಎಂಬಲ್ಲಿ ಅನ್ವಯ ಸಾಮಗ್ರಿಯ ನೆನಪಾಗಬೇಕಾದುದು ಅವಶ್ಯ. ಅದು "ಜ್ಞಾತಾ ಸತೀ" ಸಮಯಕ್ಕೆ ಸರಿಯಾಗಿ ನೆನಪಿಗೆ ಬಂದುದಾದರೆ ವಾಕ್ಯ ವಾಕ್ಯಾರ್ಥವು ಒಪ್ಪವಾಗಿ ನೇರ್ಪುಗೊಳ್ಳುತ್ತವೆ. ನೆನಪಾಗದಿದ್ದರೆ ಅಲ್ಲಿ ಪೂರ್ಣವಾಕ್ಯ ಸಿದ್ಧವಾಗುವುದಿಲ್ಲ. ಅಪೂರ್ಣ ವಾಕ್ಯದಿಂದ ವಿವಕ್ಷಿತಾರ್ಥ ಸಿಗುವುದಿಲ್ಲ. ಆಗ ವಾಕ್ಯ ವಾಕ್ಯಾರ್ಥಗಳು ಎಡಬಿಡಂಗಿ. ತೋರಿದ್ದೇ ವಾಕ್ಯ, ಹೇಳಿದ್ದೇ ಅರ್ಥ ಎಂಬಂತಾಗಿಬಿಡುತ್ತದೆ. ಅನ್ವಯ ಸಾಮಗ್ರಿಯನ್ನು ಅಳವಡಿಸಿಕೊಂಡಾಗ "ಅರ್ಥದೆಯುಂ ಧ್ವನಿಯಿಸುಗುಮೆಂಬುದು ದೂಷ್ಯಂ" ಎಂಬೀ ವಾಕ್ಯ ಸಿದ್ಧವಾಗುತ್ತದೆ. ಎನೆ ಅಥವಾ ಎಂಬುದು ಅಧ್ಯಾಹಾರ. ಸಮುಚ್ಚಯ ಗಮ್ಯವಾಗಿದೆ. ದುಷ–ವೈಚಿತ್ಯೇ ಎಂದು ಧಾತು ಪಾಠ. ವೈಚಿತ್ಯವೆಂದರೆ ಚಿತ್ತವೈಕಲ್ಯ, ಭ್ರಾಂತಿ, ಕಳವಳ ಇತ್ಯಾದಿ. "ಅವಿವೇಕ ಇತಿ ಪರ್ಯವಸಿತೋಽರ್ಥಃ." ಸದ್ಯಕ್ಕೆ "ಸರಿಯಲ್ಲ". ಇಷ್ಟು ಸಾಕು.

ಅಂತರ್ಭಾವವಾದವು ಧ್ವನಿ ವಿರೋಧವೇ ಅಲ್ಲ. ಅದು ವಿರೋಧಕ್ಕಾಗಿ ವಿರೋಧ ಅಷ್ಟೇ. ಧ್ವನಿಪ್ರಸ್ಥಾನದ ಸಂದರ್ಭದಲ್ಲಿ ಅಂತರ್ಭಾವವಾದವೆಂಬುದು ಲೆಕ್ಕಕ್ಕಿಲ್ಲ, ಅದು ನಗಣ್ಯ ಎಂಬುದಾಗಿಯೂ ಕೆಲವರ ಅಭಿಪ್ರಾಯವಿದೆ. ಅಲ್ಲಿಗೆ ವ್ಯಂಜನಾವೃತ್ತಿಯ ನಿರಾಕರಣೆಯೇ ಧ್ವನಿಕಂದದ ತಿರುಳು ಎಂದು ಹೇಳಬಹುದು.

ಕವಿರಾಜಮಾರ್ಗದ ಮೂರು ಹಸ್ತಪ್ರತಿಗಳಲ್ಲೂ ಧ್ವನಿಕಂದ ಕಂಡುಬಂದ ಕಾರಣ ಇದು ಪ್ರಕ್ಷಿಪ್ತವಲ್ಲ, ಮಾರ್ಗಕಾರನ ರಚನೆಯೆಂದೇ ಒಪ್ಪಬೇಕು ಎಂಬುದು ವಿದ್ವಾಂಸರ ಅಭಿಪ್ರಾಯ. ಮಾರ್ಗಕಾರನಿಗೆ ಧ್ವನಿಯ ಪರಿಚಯ ಸುತರಾಂ ಆಗಿರಲಿಲ್ಲ ಎಂಬುದೂ ಕೂಡ ವಿದ್ವಾಂಸರ ಅಭಿಪ್ರಾಯ. ಧ್ವನಿಕಂದವು ಪ್ರಕ್ಷಿಪ್ತವಲ್ಲ; ಮೌಲಿಕವೇ ಸರಿ ಎಂದು ಒಪ್ಪಿದಾಗ ಮಾರ್ಗಕಾರನಿಗೆ ಧ್ವನಿಯ ಸಾಮಾನ್ಯ ಪರಿಚಯ ಆಗಿತ್ತು ಎಂಬುದಾಗಿ ಒಪ್ಪಿದಂತೆಯೇ ಆಯಿತಲ್ಲ ! ಧ್ವನಿಯ ಬಗೆಗೆ ಏನೂ ಗೊತ್ತಿಲ್ಲದಿದ್ದರೆ, "ಧ್ವನಿ" ಅಂದರೆ ಕೋಶದಲ್ಲಿ ಹೇಳಿದ ಸದ್ದು ಗದ್ದಲವೆಂಬುದಿಷ್ಟು ಮಾತ್ರ ಗೊತ್ತಿದ್ದವನು "ಧ್ವನಿಯೆಂಬುದೂ ಒಂದು ಅಲಂಕಾರ" ಎಂದು ಹೇಳುವುದು ಸಂಭವವೆನಿಸುತ್ತದೆಯೇ? ಇಲ್ಲಿ ಧ್ವನಿಕಂದವೇ ಅಂತರಂಗ ಪ್ರಮಾಣವೆನಿಸುತ್ತದೆ.

"ನೆನೆವುದಿದನಿಂತು"–೪೩೭ ನೆನೆ–ಸ್ಮರಣೇ ಎಂಬುದಾಗಿ ಶಬ್ದಮಣಿ ದರ್ಪಣದ ಧಾತುಪಾಠ. ಸ್ಮರಣವೆಂದರೆ ಹಿಂದೆ ತಿಳಿದ ಅರ್ಥವನ್ನೇ ಮನಸ್ಸಿಗೆ ತಂದುಕೊಳ್ಳುವುದು. ಹಿಂದೆ ಹೇಳಿದ ಅತಿಶಯೋಕ್ತಿಯೇ ಮೊದಲಾದ ಅಲಂಕಾರ ಪೈಕಿ ಯಾವ ಅಲಂಕಾರವು ಪ್ರಕೃತ ಲಕ್ಷ್ಯದಲ್ಲಿ ಅನ್ವಯಿಸುತ್ತದೆ ಎಂಬುದಾಗಿ ಪರಿಶೀಲಿಸಿ ನಿಶ್ಚಯಿಸಿಕೊಳ್ಳಿ ಎಂದರ್ಥ. ಧ್ವನಿ ಎಂಬ ಹೆಸರಿನ ಅಪೂರ್ವವಾದ, ಅಂದರೆ ಹಿಂದೆ ನಿರೂಪಿಸದೇ ಇರುವ ಒಂದು ಅಲಂಕಾರವನ್ನು ನಿರೂಪಿಸುತ್ತಿಲ್ಲ ಎಂದರ್ಥ. ನೆನೆವುದಿದನಿಂತು ಎಂದರೆ "ಇದು ಕಮಲದೊಳನಿಮಿಷಯುಗಂ ಎಂಬುದು–ಧ್ವನಿ ಎಂಬ ಅಲಂಕಾರಕ್ಕೆ ಲಕ್ಷ್ಯ, ಉದಾಹರಣೆ ಎಂದು ತಿಳಿಯಿರಿ ಎಂಬುದೇ ಮಾರ್ಗಕಾರನ ವಿವಕ್ಷೆ. ಇಲ್ಲಂತೂ ಬೇರೆ ಅರ್ಥಾಂತರಗಳಿಗೆ ಅವಕಾಶವೇ ಇಲ್ಲ" ಎಂಬುದಿಲ್ಲಿ ಕೇಳಿಬಂದಿದೆ. ಸ್ಮರಣಾರ್ಥಕಧಾತು

ಪ್ರಯೋಗವಿದ್ದಲ್ಲಿ ಈ ಮೇಲಿನಂತೆ ಅಪೂರ್ವ ವಿಧಿಯನ್ನು ಒಪ್ಪಿದ ಉದಾಹರಣೆಯನ್ನು ನಾನು ನೋಡಿಲ್ಲ. ಆದ್ದರಿಂದ ನೆನೆವುದಿದನಿಂತು ಎಂಬುದು "ಅನುವಾದ"ವೇ ಹೊರತು ಧ್ವನಿರ್ಯೆಂಬ ಒಂದು ಅಲಂಕಾರದ ವಿಧಿಯಲ್ಲವೆಂಬುದು ನನ್ನ ಆಶಯ.

"ಕಮಲದೊಳನಿಮಿಷಯುಗಂ ಎಂಬಲ್ಲಿ ವಾಚ್ಯಾರ್ಥವು ಅಸಂಗತ ಆತ ಏವ ದೂಷ್ಯ" ಎಂಬುದಾಗಿ ಅರ್ಥದೆ ದೂಷ್ಯಂ ಎಂಬೀ ವಾಕ್ಯಕ್ಕೆ ವ್ಯಾಖ್ಯಾನ ಕಂಡುಬರುತ್ತದೆ. ಅನ್ವಯ ಸಾಮಗ್ರಿಯ ನೆನಪಾಗಲಿಲ್ಲ. ಆದ್ದರಿಂದ ಇಲ್ಲಿ ವ್ಯಾಖ್ಯಾವಿಕಲ್ಪಗಳು ಪರಿಪರಿಯಾಗಿ ಕಂಡುಬರುತ್ತವೆ. ಮಾನ್ಯ ತೀ.ನಂ.ಶ್ರೀ. ಅವರು "ಅರ್ಥದಿಂದ ಧ್ವನಿತವಾದರೆ ದೋಷವಾಗುತ್ತದೆ" ಎಂದರೇನು? ಎಂಬಲ್ಲಿ ಅನ್ವಯ ಸಾಮಗ್ರಿಯನ್ನು ನೆನಪಿಸಿಕೊಂಡಿದ್ದರೆಂದು ತೋರುತ್ತದೆ. ಆದರೆ ಅವರಿಗೆ ಆಗ ಧ್ವನಿಕಾವ್ಯ ಲಕ್ಷಣದಲ್ಲಿರುವ "ಅರ್ಥಃ ತಮರ್ಥಂ ವ್ಯನಕ್ತಿ" ಎಂಬೀ ಅಂಶ ನೆನಪಿಗೆ ಬರಲೇ ಇಲ್ಲ. ಹಾಗಾಗಿ "ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ನಮಗೆ ಪರಿಚಿತವಾಗಿರುವ ಯಾವ ವಿವರಣೆಯನ್ನೂ ಇಲ್ಲಿಗೆ ಹೊಂದಿಸಲಾಗುವುದಿಲ್ಲ" ಎಂದು ಹೇಳಿ ಮುಂದೆ ಹೋಗಿಬಿಟ್ಟರು. ಕೆಲವರಿಲ್ಲಿ ಅರ್ಥದೆ ಎಂಬೀ ತೃತೀಯಾಂತಕ್ಕೆ ಪ್ರಥಮಾಂತ ಪಂಚಮ್ಯಂತಗಳ ಹಾಗೆ ಅರ್ಥ, ಅರ್ಥಾತ್ ದೂಷ್ಯ ಎಂದು ವ್ಯಾಖ್ಯಾನಿಸುತ್ತಾರೆ. ಅನ್ವಯ ಸಾಮಗ್ರಿಯ ನೆನಪಾಗಲಿಲ್ಲ. ವಿಭಕ್ತಿ ಪಲ್ಲಟಕ್ಕಿಲ್ಲಿ ಗಮಕವೇನೂ ಇಲ್ಲ. ಗ್ರಂಥಕಾರನ ವಿವಕ್ಷೆಯೇ ಹಾಗಿದ್ದರೆ ಅದೇ ರೀತಿ ಪ್ರಯೋಗಿಸುತ್ತಿದ್ದ. "ಸ್ವಾಧೀನೇ ಶಬ್ದಪ್ರಯೋಗೇ ಕಿಮಿತ್ಯವಾಚಕಂ ಪ್ರಯುಂಜೀತ!"

ಧ್ವನಿಯೆಂಬ ಕಾವ್ಯತತ್ತ್ವದ ಆವಿಷ್ಕಾರದೊಂದಿಗೆ ತಲೆದೋರಿದ ವ್ಯಂಜನಾವೃತ್ತಿಯ ಕುರಿತಾದ ಅಸಹನೆ ಅಸಹಿಷ್ಣುತೆಗಳು ಕೆಲ ಕಾಲ ಜೀವಂತವಾಗಿದ್ದವು. ಧ್ವನಿವಿರೋಧವನ್ನು ಮುಂದಿಟ್ಟುಕೊಂಡು ಕೆಲವರು ರಚಿಸಿದ ಗ್ರಂಥಗಳು ನಿಜಕ್ಕೂ ಭಾರತೀಯ ಮೀಮಾಂಸಾ ಕ್ಷೇತ್ರಕ್ಕೆ ಸಂದ ಉತ್ತಮ ಕೊಡುಗೆಗಳೇ ಸರಿಯೆಂದು ವಿದ್ವಾಂಸರು ಹೇಳುತ್ತಾರೆ. ಕ್ರಮೇಣ ಧ್ವನಿವಿರೋಧವೆಂಬುದು ಕಾವ್ಯಮೀಮಾಂಸಾ ಕ್ಷೇತ್ರದಿಂದ ಮಾಯವಾಗಿ ಹೋಯಿತು.

ಕವಿರಾಜಮಾರ್ಗದ ಹಸ್ತಪ್ರತಿಯನ್ನು ಪತ್ತೆಹಚ್ಚಿ ಹುಡುಕಿ ತೆಗೆದು ಸಂಶೋಧಿಸಿ ಸಾಧ್ಯವಾದ ಮಟ್ಟಿಗೂ ಪರಿಷ್ಕರಿಸಿ ಸಂಪಾದಿಸಿ ಮೊದಲ ಬಾರಿಗೆ ಪ್ರಕಟಿಸಿ ನಾಡಿಗೆ ಉಪಕಾರ ಮಾಡಿದ ಮಾನ್ಯಶ್ರೀ ಕೆ.ಬಿ. ಪಾಠಕರಿಗೆ ನಾವೆಲ್ಲ ಋಣಿಗಳು. ಪಾಠಕರು ಧ್ವನಿಕಂದದಲ್ಲಿ ಯಾವ ಅರ್ಥ ಕಂಡುಕೊಂಡಿದ್ದರೆಂಬುದು ನನಗೆ ಗೊತ್ತಾಗಲಿಲ್ಲ. ಕವಿರಾಜಮಾರ್ಗ ಮದರಾಸ ಆವೃತ್ತಿಯ ಅವತರಣಿಕೆಯಲ್ಲಿ "ದಂಡಿಯು ಹೇಳಿರುವಂತೆಯೇ ಈ ಗ್ರಂಥಕರ್ತೃವೂ ಮೂವತ್ತೈದು ಬಗೆಯ ಅರ್ಥಾಲಂಕಾರ ಗಳನ್ನೂ...ಲಕ್ಷ್ಯ ಲಕ್ಷಣಗಳೊಡನೆ ವಿವರಿಸಿ ಕೊನೆಯಲ್ಲಿ ಧ್ವನಿಯೆಂಬ ಅಲಂಕಾರವೊಂದನ್ನು ಸೇರಿಸಿರುವನು" ಎಂಬೀ ವಾಕ್ಯ ಕಂಡುಬರುತ್ತದೆ. ಧ್ವನ್ಯಾಲಂಕಾರವಾದ ಸತ್ರಕ್ಕೆ ಈ ವಾಕ್ಯವೇ ಅಂಕುರಾರೋಪಣ ವೆಂದು ಗ್ರಹಿಸಬಹುದೇನೋ ! ನನ್ನ ಪರಿಚಿತರೊಬ್ಬರ ಮಾತನ್ನು ನಂಬಿ ಈ ಹಿಂದೆ ಲೇಖನವೊಂದರಲ್ಲಿ ಕಿಟ್ಟಲ್ ಕೋಶದಲ್ಲಿ ಧ್ವನ್ಯಲಂಕಾರದ

ಉಲ್ಲೇಖ ಬಂದಿದೆಯೆಂಬುದಾಗಿ "ಇರದೆ" ಪ್ರಾಮಾದಿಕವಾಗಿ ಬರೆದುಬಿಟ್ಟೆ. ಕಿಟ್ಟೆಲ್ ಕೋಶದ ಮೊದಲ ಆವೃತ್ತಿ ಹೊರಬೀಳುವ ಹೊತ್ತಿಗಿನ್ನೂ (೧೮೯೪) ಕವಿರಾಜಮಾರ್ಗದ ಹಸ್ತಪ್ರತಿ ಸಿಕ್ಕಿರಲಿಲ್ಲ ಎಂಬ ವಿಷಯ ನನಗೆ ಗೊತ್ತಾಗುವಷ್ಟರಲ್ಲಿ ಆ ನನ್ನ ಬರಹ ಪ್ರಕಟವಾಗಿ ಹೋಗಿತ್ತು. ಕಿಟ್ಟೆಲ್ ಕೋಶದ ಎರಡನೆಯ ಆವೃತ್ತಿಯಲ್ಲಿ ಧ್ವನ್ಯಲಂಕಾರದ ಉಲ್ಲೇಖವಿದ್ದುದು ನಿಜ. ಇದು ಈ ಆವೃತ್ತಿಯ ಸಂಪಾದಕರು ಸೇರಿಸಿದ್ದು. ಧ್ವನ್ಯಲಂಕಾರ ವನ್ನು ಕುರಿತು ಇದುವರೆಗೆ ಮೂವತ್ತೈದಕ್ಕೂ ಹೆಚ್ಚು ಜನ ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವಿವರಣೆಗಳನ್ನು ಬೇರೆ ಬೇರೆ ಗ್ರಂಥಗಳ ಸಂದರ್ಭದಲ್ಲಿ ಬೇರೆ ಬೇರೆ ಲೇಖನಗಳಲ್ಲಿ ಬರೆದಿದ್ದಾರೆ. ಕವಿರಾಜಮಾರ್ಗಕ್ಕೆ ಇದುವರೆಗೆ (೧೯೬೮–೨೦೧೪) ನಾಲ್ಕು ವ್ಯಾಖ್ಯಾನಗಳು ರಚಿತವಾಗಿ ಪ್ರಕಟವಾಗಿವೆ. ೧೮೯೮–೨೦೧೫ರ ಅವಧಿಯಲ್ಲಿ ಕವಿರಾಜ ಮಾರ್ಗದ ಒಂಬತ್ತು ಬೇರೆ ಬೇರೆ ಆವೃತ್ತಿಗಳು ಪ್ರಕಟವಾಗಿವೆ. ಕೆಲವು ಆವೃತ್ತಿಗಳ ಮರುಗಳೂ ಹೊರಬಿದ್ದಿವೆ. ಪ್ರತಿಪದ ಟೀಕೆಯೊಂದು ಬರಬೇಕು. ಇಂಗ್ಲೀಷ್ ಆವೃತ್ತಿಯು ಸಿದ್ಧವಾಗುತ್ತಿದೆಯಂತೆ. ಧ್ವನ್ಯಾಲಂಕಾರದ ಕೆಲವು ನಮೂನೆಗಳು ಇಂತಿವೆ:

೧. ಧ್ವನಿಯೆಂಬುದು ಅಲಂಕಾರ. ಅದು ಶಬ್ದದಿಂದ ಧ್ವನಿತ (ಸೂಚಿತ) ವಾಗುತ್ತದೆ. ಅರ್ಥದಿಂದ ಧ್ವನಿತವಾದರೆ ದುಷ್ಟವೆನಿಸುತ್ತದೆ. ಅದನ್ನು ಹೀಗೆ (ಮುಂದಿನ ಉದಾಹರಣೆಯಿಂದ) ಅರಿತುಕೊಳ್ಳಬೇಕು. ಕಮಲದಲ್ಲಿ "ಅನಿಮಿಷ"ಗಳ ಜೋಡಿ ಒಪ್ಪಿ ಕಾಣುತ್ತದೆ. ಇದು ಸೋಜಿಗ !

–ಪ್ರೊ. ಎಂ. ವಿ. ಸೀತಾರಾಮಯ್ಯ
ಕವಿರಾಜಮಾರ್ಗಂ, ೧೯೬೮
ಕಸಾಪ ಪ್ರಕಟಣೆ ೨೦೧೧ ಪುಟ ೩೫೫.

೨. ಧ್ವನಿಯೆಂಬುದೂ ಒಂದು ಅಲಂಕಾರ. ಅದು ಶಬ್ದದಿಂದ (ಅರ್ಥಾಂತರವನ್ನು) ಸೂಚಿಸುತ್ತದೆ. ಅರ್ಥವು ದೋಷಯುಕ್ತವಾಗಿರುತ್ತದೆ. ಇದರ ಉದಾಹರಣೆ ಹೀಗಿದೆ. ಕಮಲದಲ್ಲಿ ಮೀನುಗಳೆರಡು ಸೊಗಸಾಗಿ ಕಾಣುತ್ತವೆ. ಇದೇನು ಆಶ್ಚರ್ಯ !

–ಡಾ. ಕೆ. ಕೃಷ್ಣಮೂರ್ತಿ
ಕವಿರಾಜಮಾರ್ಗಂ: ಹೊಸಗನ್ನಡ ಅನುವಾದ
ಐಬಿಹೆಚ್ ಪ್ರಕಾಶನ, ಬೆಂಗಳೂರು–೯.
೧೯೮೩, ಪುಟ ೧೫೮.

೩. ಧ್ವನಿಯೆಂಬುದೂ ಒಂದು ಅಲಂಕಾರ. ಅದು ಶಬ್ದದಿಂದ ಅರ್ಥಾಂತರವನ್ನು ಸೂಚಿಸುತ್ತದೆ. ಆಪಾತವಾದ ಅರ್ಥವು ದೋಷಯುಕ್ತವಾಗಿರುತ್ತದೆ. ಇದರ ಉದಾಹರಣೆ ಹೀಗೆ: ಕಮಲದಲ್ಲಿ ಮೀನುಗಳೆರಡು ಸೊಗಸಾಗಿ ಕಾಣುತ್ತವೆ. ಇದೇನಾಶ್ಚರ್ಯ !

–ಡಾ. ಎಸ್.ಎಸ್. ಅಂಗಡಿ
ಸರಳ ಕವಿರಾಜಮಾರ್ಗ
ಮಂಗಳಾ ಪ್ರಕಾಶನ ಹೊಸಪೇಟೆ
೨೦೦೯ ಪುಟ ೨೮೩

೪. ಧ್ವನಿಯೆಂಬುದು ಅಲಂಕಾರ. ಅದು ಶಬ್ದದಿಂದ ಧ್ವನಿಸುತ್ತದೆ. ಅರ್ಥದ, ಅಂದರೆ ವಾಚ್ಯಾರ್ಥದ ದೃಷ್ಟಿಯಿಂದ ದೂಷ್ಯವಾದದ್ದು.

–ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ
ಕವಿರಾಜಮಾರ್ಗಂ
ತುಮಕೂರು ವಿಶ್ವವಿದ್ಯಾಲಯದ ಪ್ರಕಟನೆ
೨೦೧೧, ಪ್ರಸ್ತಾವನೆ

೫. "ಧ್ವನಿ" ಎಂಬುದು ಒಂದು ಅಲಂಕಾರ. ಅದು ಶಬ್ದದಿಂದ ಸೂಚಿತವಾಗುತ್ತದೆ. ಅರ್ಥದಿಂದಾದರೆ ಅದು ದೋಷಯುಕ್ತವಾಗಿರುತ್ತದೆ. ಇದನ್ನು ಈ ರೀತಿ ತಿಳಿಯಬೇಕು. "ಕಮಲದಲ್ಲಿ ಮೀನುಗಳೆರಡು ಸೊಗಸಾಗಿ ಕಾಣುತ್ತಿವೆ. ಇದೇನು ಆಶ್ಚರ್ಯ !"

–ಆರ್ವಿಯಸ್ ಸುಂದರಂ
ಕವಿರಾಜಮಾರ್ಗಂ
ಉಷಾ ಪ್ರಕಾಶನ ಮೈಸೂರು
೨೦೧೪, ಪುಟ ೨೬೭

"ಕಮಲದೊಳನಿಮಿಷಯುಗಂ" ಎಂಬೀ ಲಕ್ಷ್ಯವು ಮಾರ್ಗಕಾರನ ಪ್ರಕಾರ ಅತಿಶಯೋಕ್ತಿಯ ಉದಾಹರಣೆ. ಅತಿಶಯೋಕ್ತ್ಯಲಂಕಾರದ ಲಕ್ಷಣವನ್ನು ಮಾರ್ಗಕಾರನು ಹಿಂದೆ ತೋರಿಸಿದ್ದಾನೆ. ಅದನ್ನೇ ಅವನು "ನೆನೆವುದಿದನಿಂತು" ಎಂದು ಹೇಳಿದ್ದು.

ಮೇರೆಗಳೆದಿರೆ ವಿಶೇಷವಿ
ಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ ।
ಸಾರತರಮತಿಶಯಾಲಂ
ಕಾರಂ ....॥ ಕರಾಮಾ ೩–೯೦.

ಕಮಲದೊಳಮಿಷಯುಗಂ ಎಂಬುದಕ್ಕಿದು ಮಾರ್ಗಕಾರನ ಲಕ್ಷಣ. ಈ ಮೇಲೆ ತೋರಿಸಿದ ಧ್ವನ್ಯಾಲಂಕಾರ ಲಕ್ಷಣಗಳು ಮಾರ್ಗಕಾರನು ಹೇಳಿದ್ದಲ್ಲ. ಅವನು ಧ್ವನ್ಯಲಂಕಾರವನ್ನು ನಿರೂಪಿಸಲು ಹವಣಿಸಿದ್ದರೆ ತಾನೆ ಅದಕ್ಕೆ ಲಕ್ಷಣ ಹೇಳುವುದು? ಧ್ವನ್ಯಲಂಕಾರ, ಅದರ ಲಕ್ಷಣಗಳು ಕಳೆದ ಶತಮಾನದಲ್ಲಿ ಧ್ವನಿಕಂದದ ಸಂದರ್ಭದಲ್ಲಿ ಆಕಸ್ಮಿಕವಾಗಿ ಮೈದಳೆದಿವೆ.

ಕಾವ್ಯವೆಂಬುದು "ನಿಯತಿಕೃತನಿಯಮರಹಿತ" ವೆಂಬುದು ಕಾವ್ಯಮೀಮಾಂಸೆಯ ಮಂತವ್ಯ. ಶಾಸ್ತ್ರಾಂತರಗಳ ದೃಷ್ಟಿಯಿಂದ ಹಾಗೂ ಲೌಕಿಕ ದೃಷ್ಟಿಯಿಂದ ಮಾತ್ರವೇ "ಕಮಲದೊಳನಿಮಿಷಯುಗಂ" ಎಂಬಂತಹ ಲಕ್ಷ್ಯದಲ್ಲಿ ಅಸಾಂಗತ್ಯ ಕಂಡುಬರಬಹುದು. ಕಾವ್ಯಮೀಮಾಂಸೆಯ ದೃಷ್ಟಿಯಿಂದ ಇಲ್ಲಿ ಯಾವ ಅಸಾಂಗತವೂ ಇಲ್ಲ. ದೋಷವೂ ಇಲ್ಲ. ಶ್ರೀವಿಜಯನು ಹಾಗೆ ಹೇಳಿದನೆಂಬುದು ಬರಿಯ ಆರೋಪ; ಬಿಳಿಯ ಸುಳ್ಳು. ಕಾವ್ಯದೋಷಗಳ ಪಟ್ಟಿಯಲ್ಲಿ ಕಮಲದೊಳನಿಮಿಷಯುಗಂ ಎಂಬಂತಹ ಲಕ್ಷ್ಯಗಳಲ್ಲಿ

ಕಂಡುಬರುವ ಲೌಕಿಕ ದೃಷ್ಟಿಯ ವಾಚ್ಯಾರ್ಥಬಾಧೆಯೂ ದೋಷವೆಂದು ಪರಿಗಣಿಸಿದ್ದಾಗಿ ಕಂಡುಬರುತ್ತದೆಯೇ? ಈ ಮೇಲಿನ ಧ್ವನ್ಯಲಂಕಾರವು ಕಾವ್ಯಾಲಂಕಾರವಲ್ಲ. ವಾಚ್ಯಾರ್ಥ ಬಾಧೆಯು ಕಾವ್ಯಭೂಷಣ, ದೂಷಣವಲ್ಲ. ಧ್ವನಿಪ್ರಸ್ಥಾನದ ಸಮಗ್ರ ಪರಿಚಯವು ಮಾರ್ಗಕಾರನಿಗೆ ಆಗಿರಲಿಲ್ಲ. ವ್ಯಂಜನಾವೃತ್ತಿಯು ಅವನ ದೃಷ್ಟಿಯಲ್ಲಿ ಆಧುನಿಕೋತ್ ಪ್ರೇಕ್ಷಿತ. ಅಂದರೆ ಅವನ ಕಾಲದಲ್ಲಿ ಬೇರೆ ಶಾಸ್ತ್ರಕಾರರು ಯಾರೂ ವ್ಯಂಜನಾ ಎಂಬೊಂದು ಶಬ್ದವೃತ್ತಿ ಅರ್ಥವೃತ್ತಿ ಎಂಬುದಾಗಿ ಒಪ್ಪಿರಲಿಲ್ಲ. ಹಾಗಾಗಿ ಸಂಸ್ಕೃತದ ಧ್ವನಿಕಾವ್ಯ ಲಕ್ಷಣವಾಕ್ಯವನ್ನು ಮಾತ್ರ ಕೇಳಿದ ಅವನು "ಅರ್ಥಃ ತಮರ್ಥಂ ವ್ಯನಕ್ತಿ" ಎಂಬುದು ಸರಿಯಲ್ಲ ಎಂದು ಹೇಳಿದ. ಕಾವ್ಯದಲ್ಲಿ ವಾಚ್ಯಾರ್ಥ ಬಾಧೆಯಿದ್ದಲ್ಲಿ ಲಕ್ಷಣಾವೃತ್ತಿಯ ಮೇರೆಗೆ ಸಂಗತವಾದ ಅರ್ಥವನ್ನು ಕಂಡುಕೊಳ್ಳಬೇಕೆಂಬುದು ಕಾವ್ಯಮೀಮಾಂಸೆಯ ನಿಯಮ. ಅಂತರ್ಭಾವವಾದಕ್ಕೆ ಇಂದುರಾಜ ರತ್ನಶ್ರೀಜ್ಞಾನರ ಉದಾಹರಣೆಯಿದೆ. ಧ್ವನ್ಯಲಂಕಾರಕ್ಕೇನಿದೆ ಉದಾಹರಣೆ? ಪಂಪನದು ಶಬ್ದಾಲಂಕಾರ. ರನ್ನನದು ಕಾವ್ಯಭೂಷಣಗಳು.

ಇದುವರೆಗೆ ಎಂಟು ಜನ ಗಣ್ಯ ವಿದ್ವಾಂಸರು ಕವಿರಾಜಮಾರ್ಗ ಪಠ್ಯವನ್ನು ಸಾಧ್ಯವಾದ ಮಟ್ಟಿಗೂ ಪರಿಶೋಧಿಸಿ ಪಾಠ ಪರಿಷ್ಕಾರ ಮಾಡಿಕೊಟ್ಟಿದ್ದಾರೆ. ಬಿ.ಎಂ.ಶ್ರೀ ಮೊದಲ್ಗೊಂಡು ಇನ್ನು ಅನೇಕ ಜನ ಉದ್ದಾಮ ಪಂಡಿತರು ಪಠ್ಯ ಪರಿಷ್ಕಾರದಲ್ಲಿ ಸಲಹೆ ಸೂಚನೆ ಸಹಾಯ ನೀಡಿದ್ದಾರಂತೆ.

ಕವಿರಾಜಮಾರ್ಗದ ಶ್ರೀ ಕೆ.ಬಿ. ಪಾಠಕರು ಸಂಪಾದಿಸಿದ ಇಸ್ವಿ ೧೮೯೮ರ ಪ್ರತಿಯನ್ನು ಇದೀಗ (೨೦೧೫) ಮಾನ್ಯಶ್ರೀ ಸೀತಾರಾಮ ಜಾಗೀರ್‌ದಾರ್ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಪಾಠಕರು ಸಂಪಾದಿಸಿದ ಕವಿರಾಜಮಾರ್ಗದ ಆವೃತ್ತಿಯಲ್ಲಿ ಅವರು ಇಂಗ್ಲೀಷಿನಲ್ಲಿ ಪ್ರಸ್ತಾವನೆ ಬರೆದಿದ್ದಾರೆಂದು ಕೇಳಿದ್ದೆ. ಆ ಇಂಗ್ಲಿಷ್ ಪ್ರಸ್ತಾವನೆ ಜಾಗೀರ್‌ದಾರರ ಪ್ರತಿಯಲ್ಲಿ ಬರಲಿಲ್ಲ. ಪೀಠಿಕೆ, ಪಾಠಕರ ಇತಿವೃತ್ತ, ಕವಿರಾಜಮಾರ್ಗ್ಗ ಕೆಲವು ಹೊಸಸಂಗತಿಗಳು ಹಾಗೂ ಮೂಲ ಪಠ್ಯಭಾಗ ಇವಿಷ್ಟು ಶ್ರೀ ಜಾಗೀರದಾರರ ಪ್ರತಿಯಲ್ಲಿ ಕಂಡುಬರುತ್ತವೆ. ಹೊರಬಿದ್ದ ಹೊಸ ಸಂಶೋಧನೆಯ ಪ್ರಕಾರ ಕವಿರಾಜಮಾರ್ಗದ ರಚನೆಯ ಕಾಲ ಪ್ರಾಯಃ ಇಸ್ವಿ ೮೧೬ರ ಎಡಬಲ ಇರಬೇಕು ಎಂಬುದಾಗಿ ಶ್ರೀ ಜಾಗೀರದಾರ್ ಹೇಳುತ್ತಾರೆ (ಕವಿರಾಜಮಾರ್ಗ್ಗ: ಕೆಲವು ಹೊಸ ಸಂಗತಿಗಳು: ಪುಟ ೧೯). ಪಾಠಪರಿಷ್ಕಾರ ಛಂದಸ್ಸು ಶಬ್ದಾರ್ಥಗಳು ಮುಂತಾಗಿ ಇನ್ನೂ ಕೆಲವು ಹೊಸ ಸಂಗತಿಗಳನ್ನು ಶ್ರೀಯುತರು ಇಲ್ಲಿ ದಾಖಲಿಸಿದ್ದಾರೆ. ಪುರುಳಿ, ಬಾಹ್ಲೀಕ ಮುಂತಾಗಿ ಕೆಲವು ಶಬ್ದಗಳ ಅರ್ಥಗಳನ್ನು ಚರ್ಚಿಸಿದ್ದಾರೆ. ಬಾಹ್ಲೀಕ ಎಂದರೆ ದೇಶವೊಂದರ ಹೆಸರಲ್ಲ. ಮಹಾರಾಷ್ಟ್ರೀ ಪ್ರಾಕೃತದಲ್ಲಿ ಬಾಹ್ಲೀಕ ಅಂದರೆ ದನ ಕಟ್ಟಲು ಬಳಸುವ ಹಗ್ಗ ದಾಂಬುಕಣ್ಣಿ ಎಂದರ್ಥವಂತೆ. ಹೀಗೆ ಇಲ್ಲಿಗೆ ಸಂಬಂಧಿಸಿದಂತೆ ಇನ್ನೂ ಕೆಲವು ಸಂಗತಿಗಳನ್ನು ಜಾಗೀರದಾರರು ಈ ತಮ್ಮ ಸಂಪಾದಿತ ಕೃತಿ ನಿರವದ್ಯಾನ್ವಯ ಶ್ರೀವಿಜಯ ಕೃತಿ ಕವಿರಾಜಮಾರ್ಗ್ಗಂದಲ್ಲಿ ನಮೂದಿಸಿದ್ದಾರೆ. ಮುಂದಿನ ಪರಿಷ್ಕಾರಕ್ಕೆ ಇವೆಲ್ಲವೂ ಉಪಯುಕ್ತ ಸಾಮಗ್ರಿಯ ರೂಪದಲ್ಲಿ ಬಳಕೆಯಾಗಬಹುದು.

ಹಾಗೆಯೇ ಕವಿರಾಜಮಾರ್ಗದ ಈ ಮುಂದೆ ಬರಲಿರುವ ಹೊಸ ಮುದ್ರಣ ಮರುಮುದ್ರಣಗಳಲ್ಲಿ ಧ್ವನಿಕಂದಕ್ಕೆ ಅಡಿಟಿಪ್ಪಣಿಯ ರೂಪದಲ್ಲಿ ಸಂಸ್ಕೃತದ ಧ್ವನಿಕಾವ್ಯ ಲಕ್ಷಣಕಾರಿಕೆಯನ್ನು ಅಳವಡಿಸಿದರೆ ಅಭ್ಯಾಸಕ್ಕೆ ಅನುಕೂಲವಾಗಬಹುದು.



# ಸಂಸ್ಕೃತ ಭಾಷೆಯ ಪ್ರಭೇದಗಳು



ಡಾ. ಎಚ್.ಎಸ್. ಅನಂತನಾರಾಯಣ

"ಯತ್ ಪುರುಷೋ ಮನಸಾಭಿಗಚ್ಛತಿ ತದ್ ವಾಚಾ ವದತಿ" ಎಂದು ಶ್ರುತಿವಾಕ್ಯ (ತೈ.ಆ. ೧.೨೩.೪೯). "ಮನುಷ್ಯ ಮನಸಿನಲ್ಲಿ ನೆನೆಸಿದ್ದನ್ನು ಮಾತುಗಳ ಮೂಲಕ ಪ್ರಕಟಿಸುತ್ತಾನೆ". ಮನುಷ್ಯನನ್ನು ಇತರ ಪ್ರಾಣಿಗಳಿಂದ ಪ್ರತ್ಯೇಕಿಸುವುದೇ ಈ ವಾಕ್ ಶಕ್ತಿ. ಮಾತನಾಡಲು ಪ್ರಾರಂಭಿಸಿದಂದಿನಿಂದಲೇ ಮಾನವನ ವಿಕಾಸವಾಯಿತೆನ್ನಬಹುದು. ಭಾಷೆಯಿಲ್ಲದ ಮಾನವ ಸಮಾಜವೇ ಕಂಡುಬಂದಿಲ್ಲ. ಲಿಖಿತರೂಪವಿಲ್ಲದ ಆಡುಭಾಷೆಗಳಿವೆ (ಉದಾ. ತೊದ, ಬದಗ). ಲಿಖಿತರೂಪವಿರುವ ಭಾಷೆಗಳಲ್ಲಿ ಅದನ್ನಾಡುವ ಜನರ ಸಾಹಿತ್ಯ, ಸಂಸ್ಕೃತಿ, ಚರಿತ್ರೆ ಇತ್ಯಾದಿಗಳು ದಾಖಲೆಯಾಗಿ ಮುಂದಿನ ಪೀಳಿಗೆಗೆ ಉಳಿದುಬರುತ್ತವೆ (ಉದಾ. ಕನ್ನಡ). ಲಿಖಿತರೂಪವಿಲ್ಲದ ಭಾಷೆಗಳಲ್ಲಿ ಈ ಸೌಲಭ್ಯವಿರುವುದಿಲ್ಲ. ಭಾಷೆಯೊಂದಕ್ಕೆ ತನ್ನದೇ ಆದ ಸುದೀರ್ಘ ಇತಿಹಾಸವಿರಬಹುದು. ಅಂತಹ ಭಾಷೆಗಳ ಬೆಳವಣಿಗೆಯಲ್ಲಿ ಒಂದು ಕಾಲದಿಂದ ಇನ್ನೊಂದು ಕಾಲದ ವೇಳೆಗೆ ಅದರಲ್ಲಾಗಿರುವ ಬದಲಾವಣೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ (ಉದಾ. ಹಳಗನ್ನಡ>ನಡುಗನ್ನಡ>ಹೊಸಗನ್ನಡ). ಹಾಗೆಯೇ, ಯಾವುದೇ ಭಾಷೆಯನ್ನಾಡುವ ಕ್ಷೇತ್ರ ವಿಸ್ತಾರವಾಗಿರಬಹುದು. ಆಗ ವಿವಿಧ ಕ್ಷೇತ್ರಗಳ ಭಾಷಾಸ್ವರೂಪ ಭಿನ್ನವಾಗಿರುತ್ತದೆ (ಉದಾ. ಮೈಸೂರು ಕನ್ನಡ, ಹುಬ್ಬಳ್ಳಿ ಕನ್ನಡ). ಅತಿ ಸೀಮಿತವಾದ ಕ್ಷೇತ್ರದಲ್ಲಿ ಉಪಯೋಗದಲ್ಲಿರುವ ಭಾಷೆಯಲ್ಲೂ ವೃದ್ಧರ ಮಾತಿಗೂ ಕಿರಿಯರ ಮಾತಿಗೂ ವ್ಯತ್ಯಾಸಗಳು ಕಾಣಬರುವುದುಂಟು. ಹೀಗೆ ಕಾಲ, ದೇಶ, ಸಮಾಜದ ಸ್ತರಗಳನ್ನವಲಂಬಿಸಿ ಭಾಷೆಯಲ್ಲಿ ಕಾಣಬರುವ ಭಿನ್ನತೆಗಳನ್ನು ಆ ಭಾಷೆಯ "ಪ್ರಭೇದ"ಗಳೆನ್ನುತ್ತಾರೆ. ಪ್ರಭೇದಗಳೇ ಕಂಡುಬರದ ಭಾಷೆ ಇರುವುದಿಲ್ಲ. ಲಿಖಿತರೂಪ ಹಾಗೂ ದೀರ್ಘ ಇತಿಹಾಸವಿರುವ ಆರ್ಯಭಾಷೆಯಾಗಿದ್ದ ಸಂಸ್ಕೃತದಲ್ಲಿ ಸಹ ಮೇಲೆ ಹೇಳಿದ ಎಲ್ಲ ರೀತಿಯ ಪ್ರಭೇದಗಳು ಕಂಡುಬರುತ್ತವೆ. ಅವುಗಳನ್ನು ಉದಾಹರಣೆಗಳಿಂದ ಪರಿಚಯಿಸುವುದೇ ಈ ಲೇಖನದ ಉದ್ದೇಶ.

ಭಾಷಾಶಾಸ್ತ್ರಜ್ಞರ ಸಂಶೋಧನೆಯಿಂದ ತಿಳಿದುಬಂದಿರುವಂತೆ, ಹೊರಗಿನಿಂದ ಇಲ್ಲಿಗೆ ಬಂದ ಆರ್ಯರು ತಾವಾಡುತ್ತಿದ್ದ ಭಾಷೆಯನ್ನು ಏನೆಂದು ಕರೆಯುತ್ತಿದ್ದರೋ ತಿಳಿಯದು. ವೇದದಲ್ಲಾದರೋ ದೇವತೆಗಳು ದೈವೀವಾಕ್ಕನ್ನು (–ಸಂಸ್ಕೃತ?) ಸೃಷ್ಟಿಸಿಕೊಂಡರೆಂದೂ ಅದನ್ನು ಪ್ರಾಣಿಗಳು ಬೇರೆ ಬೇರೆ ರೂಪದಲ್ಲಿ ಉಪಯೋಗಿಸಿದರೆಂದೂ ಉಲ್ಲೇಖವಿದೆ (ತೈ.ಬ್ರಾ. ೨.೪.೬ ದೇವೀಂ ವಾಚಮ್ ಅಜನಯಂತ ದೇವಾಃ. ತಾಂ ವಿಶ್ವರೂಪಾಃ ಪಶವೋ ವದಂತಿ). ನಂತರ ರಾಮಾಯಣದಲ್ಲಿ ಭಾಷೆಗೆ ಸಂಬಂಧಿಸಿದ ಎರಡು ಉಲ್ಲೇಖಗಳು ದೊರಕುತ್ತವೆ. ಸೀತಾದೇವಿಯನ್ನು ಅಶೋಕವನದಲ್ಲಿ ಕಂಡಾಗ ಅವಳೊಡನೆ ಯಾವ ಭಾಷೆಯಲ್ಲಿ ತಾನು ಮಾತನಾಡಬೇಕೆಂದು ಆಲೋಚಿಸಿದ ಹನುಮಂತನು, "ದ್ವಿಜರಾಡುವಂತೆ ಸುಸಂಸ್ಕೃತವಾದ (–ಶುದ್ಧವಾದ) ಮಾತನ್ನು ಪ್ರಯೋಗಿಸಿದರೆ" (೫.೩೦.೧೭ ಯದಿ ವಾಚಂ ಪ್ರಯೋಕ್ಷ್ಯಾಮಿ ದ್ವಿಜಾತಿರಿವ ಸಂಸ್ಕೃತಾಂ) ಸೀತೆಯು ತನ್ನನ್ನು ರಾವಣನೆಂದು ತಿಳಿದು ಹೆದರಿಕೊಳ್ಳಬಹುದೆಂದು ಶಂಕಿಸುತ್ತಾನೆ. ಇಲ್ಲಿ ಸಂಸ್ಕೃತಾಂ ಎಂಬ ಪದ ವಾಚಂ ಎಂಬುದಕ್ಕೆ ವಿಶೇಷಣವಾಗಿ ಉಪಯೋಗವಾಗಿದೆ. ದ್ವಿಜರಲ್ಲದವರು ಅಷ್ಟು ಶುದ್ಧವಾದ ಭಾಷೆಯನ್ನಾಡುತ್ತಿರಲಿಲ್ಲವೆಂಬ ಸೂಚನೆ ಇಲ್ಲಿದೆ. ಇನ್ನೊಂದು ಸಂದರ್ಭದಲ್ಲಿ ಇಲ್ವಲನೆಂಬ ರಾಕ್ಷಸನು ಬ್ರಾಹ್ಮಣರನ್ನು ಕೊಲ್ಲುವ ಉದ್ದೇಶದಿಂದ ಶ್ರಾದ್ಧಕ್ಕಾಗಿ ಅವರನ್ನು ಆಹ್ವಾನಿಸುತ್ತಿದ್ದನೆಂದೂ, ಆಗ ಬ್ರಾಹ್ಮಣ ವೇಷ ತಾಳಿ ತಾನೂ ಅವರಂತೆ ಸಂಸ್ಕೃತವನ್ನಾಡುತ್ತಿದ್ದನೆಂದೂ (೩.೨.೫೮ ಧಾರಯನ್ ಬ್ರಾಹ್ಮಣರೂಪಂ ಇಲ್ವಲಃ ಸಂಸ್ಕೃತಂ ವದನ್) ಇದೆ. ಇಲ್ಲಿ ಸಂಸ್ಕೃತಂ ಎನ್ನುವ ಪದ ಭಾಷೆಯನ್ನು ತಿಳಿಸುವುದೇನೋ? ಆಗ ನಾವು ಆರ್ಯರ ಭಾಷೆ "ಸಂಸ್ಕೃತ" ಎನ್ನಬಹುದು. ಸಂಸ್ಕೃತ ಭಾಷೆಗೆ ಸುದೀರ್ಘ ಇತಿಹಾಸವಿದೆ. ಹೆಸರೇ ಹೇಳುವಂತೆ, ಇದು ವ್ಯಾಕರಣನಿಯಮಬದ್ಧ ಶುದ್ಧರೂಪ, ಗ್ರಾಂಥಿಕರೂಪ, ಶಿಷ್ಟರ ಭಾಷೆ, ಇದಲ್ಲದೆ, ಕೇವಲ ಆಡುಭಾಷೆಯ ರೂಪದಲ್ಲೇ ಉಳಿದ ಹಲವು ಪ್ರಭೇದಗಳಿದ್ದಿರಬೇಕು. ಅವುಗಳನ್ನೇ ಒಂದರ್ಥದಲ್ಲಿ ಪ್ರಾಕೃತವೆನ್ನಬಹುದು. ಪ್ರಕೃತಿ ಎಂದರೆ ಸಾಮಾನ್ಯಜನರೆಂದೂ, ಅವರಾಡುವ ಭಾಷಾರೂಪಗಳೇ ಪ್ರಾಕೃತವೆಂದೂ ರುದ್ರಟನ ಕಾವ್ಯಾಲಂಕಾರದ ವೃತ್ತಿಕಾರ ನಮಿಸಾಧು ವ್ಯಾಖ್ಯಾನಿಸಿದ್ದಾನೆ (ಪ್ರಕೃತೇಃ ಪ್ರಾಕೃತಂ). ಈ ಸಂದರ್ಭದಲ್ಲಿ ಕಾಳಿದಾಸನ ಪ್ರಸಿದ್ಧವಾದೊಂದು ವಾಕ್ಯವನ್ನು ಸ್ಮರಿಸಬಹುದು (ರಾಜಾ ಪ್ರಕೃತಿರಂಜನಾತ್). ಹೇಮಚಂದ್ರನಾದರೋ ತನ್ನ ವ್ಯಾಕರಣದಲ್ಲಿ ಪ್ರಕೃತಿ ಶಬ್ದವನ್ನು ಸಂಸ್ಕೃತವೆಂದು ನಿರ್ವಚಿಸಿ, ಅದರಿಂದ ಬೆಳೆದುಬಂದ ಭಾಷಾರೂಪಗಳನ್ನು ಪ್ರಾಕೃತಗಳೆಂದು ಹೆಸರಿಸಿದ್ದಾನೆ (ಪ್ರಕೃತಿಃ ಸಂಸ್ಕೃತಂ; ತತ್ರ ಭವಂ ಆಗತಂ ವಾ ಪ್ರಾಕೃತಂ). ಅವುಗಳಿಗೆ ವ್ಯಾಕರಣನಿಯಮಗಳಿಲ್ಲವೆಂದಿಲ್ಲ. ಅವುಗಳಿಗೆ ಸಂಬಂಧಿಸಿದ ವ್ಯಾಕರಣಗಳೇ ಬೇರೆ. ಅಂದರೆ, ಜನರಾಡುವ ಭಾಷಾರೂಪಗಳಿಗೂ ವ್ಯಾಕರಣ ನಿಯಮಗಳಿದ್ದೇ ತೀರಬೇಕು. ಸಂಸ್ಕೃತ ಭಾಷೆಗೆ ಅನ್ವಯಿಸುವ ನಿಯಮಗಳು ಪಾಣಿನಿಯ ಶಬ್ದಾನುಶಾಸನದಲ್ಲಿ ದೊರೆತರೆ, ಪ್ರಾಕೃತಗಳಿಗೆ ಅನ್ವಯಿಸುವ ನಿಯಮಗಳು ಹೇಮಚಂದ್ರಸೂರಿಯ ಸಿದ್ಧಹೇಮಶಬ್ದಾನುಶಾಸನದ ಎಂಟನೆಯ ಅಧ್ಯಾಯದಲ್ಲಿ ದೊರಕುತ್ತವೆ. ಅವನ್ನಾಡುತ್ತಿದ್ದ ಪ್ರಾಕೃತಪ್ರಭೇದಗಳನ್ನು ಕ್ಷೇತ್ರಗಳ ಆಧಾರದ ಮೇಲೆ

ಶೌರಸೇನೀ, ಮಹಾರಾಷ್ಟ್ರೀ, ಮಾಗಧೀ ಎಂದು ಗುರುತಿಸಿದ್ದಾರೆ. ಪಾಣಿನಿಯೂ ಸಂಸ್ಕೃತ ಪ್ರಭೇದಗಳನ್ನು ಪ್ರಾಚ್ಯಾಂ (ಪೂರ್ವದಲ್ಲಿ), ಉದೀಚ್ಯಾಂ (ಉತ್ತರದಲ್ಲಿ) ಎಂಬ ಪದಗಳಿಂದ ಗುರುತಿಸಿದ್ದಾನೆ. ಹಾಗೆಯೇ, ವೇದದ ಭಾಷೆಯನ್ನು ಛಂದಸಿ (ಛಂದಸ್ಸಿನಲ್ಲಿ) ಎಂದೂ, ನಂತರದ ಸಂಸ್ಕೃತವನ್ನು ಭಾಷಾಯಾಂ (ಆಡುಭಾಷೆಯಲ್ಲಿ) ಎಂದೂ ಹೇಳುತ್ತಾನೆ. ಇವುಗಳಲ್ಲಿ ಮೊದಲಿನವು ಕ್ಷೇತ್ರೀಯ ಪ್ರಭೇದಗಳೆನಿಸಿದರೆ, ಎರಡನೆಯವರು ಕಾಲಿಕ ಪ್ರಭೇದಗಳೆನ್ನಬಹುದು. ಹಲವಾರು ಪ್ರಭೇದಗಳ ಮಧ್ಯೆ ಯಾವುದೋ ಒಂದು ಪ್ರಭೇದಕ್ಕೆ ಹೆಚ್ಚಿನ ಆಶ್ರಯ ದೊರೆತು ಅದು ಗ್ರಾಂಥಿಕರೂಪವಾಗಿ ಆರಿಸಲ್ಪಡುತ್ತದೆ. ಹಾಗಾದ ನಂತರ ಅದರಲ್ಲಿ ಆಡುಭಾಷೆಗಳಿಗಿರುವ ಸ್ವಾತಂತ್ರ್ಯ ತಪ್ಪಿಹೋಗುತ್ತದೆ. ಇತಿಹಾಸದ ಪ್ರತಿಯೊಂದು ಕಾಲದಲ್ಲೂ ಬೇರೆ ಬೇರೆ ಪ್ರಭೇದಗಳು ಸಾಹಿತ್ಯಭಾಷೆಯ ಸ್ಥಾನಕ್ಕೇರಬಹುದು.

ಈ ಭಾಷೆಯ ಮೊದಲ ಹಂತವಾದ ವೇದದ ಭಾಷೆಯಲ್ಲಿ ಪ್ರಭೇದಗಳಿರುವುದು ಕಂಡುಬರುತ್ತದೆ. ಇದರ ಹಳೆಯ ಭಾಗದಲ್ಲಿ (ಅಂದರೆ, ೨-೭ ಮಂಡಲಗಳಲ್ಲಿ) ಕೇವಲ ರ-ಕಾರವೂ (ಮುಚ್, ರಭ್, ರೋಮ, ರೋಹಿತ), ಸ್ವಲ್ಪ ನಂತರದ ಕಾಲದ್ದೆನ್ನುವ ಹತ್ತನೆಯ ಮಂಡಲದಲ್ಲಿ ಲ-ಕಾರವೂ (ಮ್ಲುಚ್, ಲಭ್, ಲೋಮ, ಲೋಹಿತ) ಕಾಣಸಿಗುತ್ತವೆ. ಹಾಗೆಯೇ ಮೊದಲಿನ ಭಾಗಗಳಲ್ಲಿನ ಉಪರ, ಪ್ರವ, ರಿಪ್ತ, ಮೊರ ಎಂಬುವಕ್ಕೆ ಈಚಿನ ಭಾಗದಲ್ಲಿ ಕ್ರಮವಾಗಿ ಉಪಲ (ಕಲ್ಲು) ಪ್ಲವ (ದೋಣಿ) ಲಿಪ್ತ (ಲೇಪಿಸಿದ) ಮೊಲ (ಬುಡ) ಎಂದಿವೆ. ಋಗ್ವೇದದಲ್ಲಿನ ರ-ಕಾರಕ್ಕೆ ಅಥರ್ವವೇದದಲ್ಲಿ ಲ-ಕಾರವಿದೆ (ಋ. ರಪ್, ಅಶ್ರೀರ, ಪಾಂಸುರೆ : ಅಥರ್ವ. ಲಪ್, ಅಶ್ಲೀಲ, ಪಾಂಸುಲೆ). ಬ್ರಾಹ್ಮಣ ಭಾಗದಲ್ಲಿ ಲ-ಕಾರ ಹೆಚ್ಚು ಹೆಚ್ಚು ಕಂಡುಬರುತ್ತದೆ. ಸಾಹಿತ್ಯ ಭಾಷೆಯಲ್ಲಿ ರ-ಕಾರ ಮಾತ್ರವಿದ್ದಿರಬೇಕು; ಆಡುಭಾಷೆಯಲ್ಲಿ ಲ-ಕಾರವಿತ್ತೆನ್ನಬಹುದು. ಪ್ರಾಕೃತಗಳ ಮಧ್ಯೆ ಮಾಗಧೀ ಭಾಷೆಯಲ್ಲಿ ಕೇವಲ ಲ-ಕಾರವಿದೆ.

ಶತಪಥ ಬ್ರಾಹ್ಮಣದಲ್ಲಿ ದೇವತೆಗಳ ಜ್ಞಾತಿಗಳಾದ ಅಸುರರು (ದೇವತೆಗಳು ಮತ್ತು ಅಸುರರು, ಇಬ್ಬರೂ ಪ್ರಜಾಪತಿಯ ಮಕ್ಕಳು) ದೇವತೆಗಳ ಮಾತಿನ ರ-ಕಾರಸ್ಥಾನದಲ್ಲಿ ಲ-ಕಾರ ಪ್ರಯೋಗಿಸಿದರೆಂದೂ ಅದರಿಂದಾಗಿ ಗುಪ್ತರೂಪದಲ್ಲಿ ಬಂದಿದ್ದ ಅವರು ಗುರುತಿಸಲ್ಪಟ್ಟರೆಂದೂ, ಹಾಗಾಗಿ ಅವರು ಪರಾಜಿತರಾದರೆಂದೂ ತಿಳಿದುಬರುತ್ತದೆ (ಶ.ಬ್ರಾ. ೩.೨.೧.೨೩ ತೇಸುರಾ ಆತ್ತವಚಸೊ ಹೇಲವೋ ಹೇಲವ ಇತಿ ವದಂತಃ ಪರಾಬಭೂವುಃ - ಅರಯಃ ಶತ್ರುಗಳು ಎಂದು ಹೇಳುವ ಬದಲು ಅಸುರರು ಅಲಯಃ ಎಂದರು). ಅದೇ ಬ್ರಾಹ್ಮಣದಲ್ಲಿ ಕುರು-ಪಂಚಾಲರು ಉತ್ತಮ ಭಾಷೆಯನ್ನಾಡುತ್ತಿದ್ದರೆಂದಿದೆ (ಶ.ಬ್ರಾ. ೩.೨.೩.೧೫ ತಸ್ಮಾದ್ ಅತ್ರೋತ್ತರಾ ಹಿ ವಾಗ್ ವದತಿ ಕುರುಪಂಚಾಲತ್ರಾ ವಾಘ್ಯೇಷಾ). ಹಾಗೆಯೇ, ಕೌಶೀತಕೀ ಬ್ರಾಹ್ಮಣದಲ್ಲಿ ಭಾರತದ ವಾಯವ್ಯಪ್ರದೇಶದ ಭಾಷೆ ಇತರ ಪ್ರಭೇದಗಳಿಗಿಂತ ಶ್ರೇಷ್ಠವಾಗಿತ್ತೆಂದಿದೆ (=ಶಿಷ್ಟಭಾಷೆ) (ಕೌ.ಬ್ರಾ. ತಸ್ಮಾದ್ ಉದೀಚ್ಯಾಂ ದಿಶಿ ಪ್ರಜ್ಞಾತತರಾ ವಾಗ್ ಉದ್ಯತ. ಉದಂಚ ಉ ಏವ ವಾಚಂ ಶಿಕ್ಷಿತುಂ. ಯೋ ವಾ ತತ ಆಗಚ್ಛತಿ ತಸ್ಯ ವಾ ಶುಶ್ರೂಯಂತ ಇತಿ ಹ

ಸ್ಮಾಹ್ಯೆಷಾ ಹಿ ವಾಚೋ ದಿಕ್ ಪ್ರಜ್ಞಾತಾ ಆದ್ದರಿಂದ ಉತ್ತರದಲ್ಲಿ ಮಾತು ಹೆಚ್ಚು ಶುದ್ಧವೆಂದೂ, ಆ ಪ್ರಭೇದವನ್ನು ಕಲಿಯಲು ಜನರು ಉತ್ತರಕ್ಕೆ ಹೋಗುತ್ತಿದ್ದರೆಂದೂ, ಅಲ್ಲಿ ಹೋಗಿ ಬಂದವನು ಶುದ್ಧಭಾಷೆಯನ್ನಾಡುತ್ತಾನೆಂದೂ, ಅದನ್ನು ಜನರು ಕೇಳಿಸಿಕೊಂಡು ಆದರಿಸುತ್ತಿದ್ದರೆಂದೂ ತಿಳಿಯುತ್ತದೆ. ಈ ಪ್ರಮಾಣಗಳಿಂದ ವೇದದ ಭಾಷೆಯಲ್ಲಿ ಪ್ರಾದೇಶಿಕ ಪ್ರಭೇದಗಳಿದ್ದವೆಂದು ತಿಳಿದುಬರುತ್ತದೆ.

ಕಾಲಿಕ ಪ್ರಭೇದಗಳಾದ ವೇದದ ಭಾಷೆಗೂ ನಂತರದ ಸಂಸ್ಕೃತ ಭಾಷೆಗೂ ಮಧ್ಯೆ ವ್ಯತ್ಯಾಸಗಳಿವೆ. ಮುಖ್ಯವಾಗಿ, ವೇದದಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಎಂಬ ಸ್ವರಾಘಾತವಿದೆ; ಅದರಿಂದಲೇ, ಎರಡು ಪದಗಳ ನಡುವಣ ಅರ್ಥವ್ಯತ್ಯಾಸ ಸೂಚಿಸಲ್ಪಡುತ್ತದೆ ಉದಾ. ಬ್ರಹ್ಮನ್, ನಪುಂ. (ಆದ್ಯುದಾತ್ತ); ಬ್ರಹ್ಮನ್, ಪು. (ಅಂತೋದಾತ್ತ). ಸಂಸ್ಕೃತದಲ್ಲಿ ಈ ಸ್ವರಾಘಾತ ಪೂರ್ಣವಾಗಿ ನಷ್ಟವಾಗಿದೆ. ವೇದದಲ್ಲಿರುವ ಕೆಲವು ಸ್ವಾತಂತ್ರ್ಯ ಸಂಸ್ಕೃತದಲ್ಲಿಲ್ಲ. ಅ–ಕಾರಾಂತ ನಾಮಪದಗಳ ತೃತೀಯಾ ಬಹುವಚನ ರೂಪವನ್ನು ಪಡೆಯಲು –ಎಭಿಃ ಅಥವಾ –ಐಃ ಎಂಬೆರಡು ಪ್ರತ್ಯಗಳಿದ್ದವು (ಉದಾ. ಪೂರ್ವೇಭಿಃ, ನೂತನ್ಯೈಃ); ಆದರೆ, ಸಂಸ್ಕೃತದಲ್ಲಿ ಕೇವಲ –ಐಃ ಉಳಿದಿದೆ (ಪೂರ್ವೈಃ, ನೂತನ್ಯೈಃ). ಹಾಗೆಯೇ, ಪ್ರಥಮಾ ಬಹುವಚನ ಸೂಚಿಸಲು ವೇದದಲ್ಲಿ –ಆಸಃ ಮತ್ತು –ಆಃ ಎಂಬೆರಡು ಪ್ರತ್ಯಯಗಳಿವೆ (ಉದಾ. ಜನಾಃ, ಜನಾಸಃ); ಸಂಸ್ಕೃತದಲ್ಲಿ ಕೇವಲ –ಆಃ ಉಳಿದಿದೆ (ಜನಾಃ). ವೇದದಲ್ಲಿ ಉತ್ತಮಪುರುಷ ಬಹುವಚನ ಕ್ರಿಯಾರೂಪದಲ್ಲಿ –ಮಃ ಮತ್ತು –ಮಸಿ ಎಂಬೆರಡು ಪ್ರತ್ಯಯಗಳು ಸಾಧ್ಯ (ಮಿನೀಮಸಿ, ವದಾಮಃ); ಸಂಸ್ಕೃತದಲ್ಲಿ ಕೇವಲ –ಮಃ ಉಳಿದಿವೆ (ಚರಾಮಃ). ವೇದದಲ್ಲಿ ಧಾತುಗಳೊಡನೆ ಸೇರುವ ಉಪಸರ್ಗಗಳು ಕೂಡಿಯೇ ಇರಬೇಕೆಂಬ ನಿಯಮವಿಲ್ಲ. ಅವು ಕೂಡಿಯೂ, ಬೇರೆಯಾಗಿಯೂ, ಧಾತುವಿನ ನಂತರವೂ ಕಾಣಸಿಗುತ್ತವೆ (ಉದಾ. ಪ್ರ...ಮಿನೀಮಸಿ, ಪ್ರತ್ಯಸ್ಮಿನ್ ಲೊಕೇ ತಿಷ್ಠತಿ, ಆ ತ್ವಾ ವಿಶಂತು; ಅಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ, ಅಷ್ಟೌ ಸಂಪದ್ಯಂತೇ; ಅವೃಣೋದ್ ಅಪ, ದೇವಾ ಅಮುಂಚನ್ನಸೃಜನ್ ವ್ಯೇನಸಃ). ಎರಡು–ಮೂರು ಉಪಸರ್ಗಗಳು ಕೂಡಿರಬಹುದು (ಉದಾ. ಸ ವರಾಹೋ ರೂಪಂ ಕೃತ್ವೋಪನ್ಯಮಜ್ಜತ್, ತಂ ಜ್ಯೋತಿಃ ಪಶ್ಯಂತೀಃ ಪ್ರಜಾ ಅಭಿಸಮಾವರ್ತನ್ತೇ). ಅದೇ ಉಪಸರ್ಗ ಆವರ್ತಿಸಬಹುದು, ಉದಾ. ಪ್ರ ಪ್ರಾನ್ಯೇ ಯಂತಿ. ಈ ಸ್ವಾತಂತ್ರ್ಯ ಸಂಸ್ಕೃತದಲ್ಲಿಲ್ಲ. ಅಲ್ಲಿ ಉಪಸರ್ಗವು ಯಾವಾಗಲೂ ಧಾತುವಿನೊಂದಿಗೆ ಕೂಡಿಯೇ ಇರಬೇಕು.

ಶಬ್ದಕೋಶದಲ್ಲಿ ಸಹ ಎರಡು ಪ್ರಭೇದಗಳ ನಡುವೆ ವ್ಯತ್ಯಾಸವಿದೆ. ವೇದದಲ್ಲಿ ಕೃತ್ ಮತ್ತು ತದ್ಧಿತ ಎರಡೂ ಹೆಚ್ಚು ರೂಪಗಳಲ್ಲಿ ಕಂಡುಬರುತ್ತವೆ. ಉದಾ: –ಯು ಎಂಬ ಪ್ರತ್ಯಯದ ಅನೇಕ ಶಬ್ದರೂಪಗಳು ಇವೆ –ಯಜ್ಯು (ಸಾತ್ವಿಕ) ದೇವಯು (ದೇವತಾನಿಷ್ಠ) ವಾಜಯು (ಗೆಲ್ಲಬೇಕೆಂಬಾಸೆ) ಇವುಗಳಲ್ಲಿ ಸಾಧಾರಣವಾಗಿ ಕಂಡುಬರುತ್ತಿದ ಮನ್ಯು (ಕೋಪ) ದಸ್ಯು ಕಳ್ಳ ಮೊದಲಾದ ಕೆಲವೇ ಸಂಸ್ಕೃತದಲ್ಲಿ ಉಳಿದುಬಂದಿವೆ. ಸಾಮಾಜಿಕ ಬದಲಾವಣೆಯಿಂದಾಗಿ ವೇದಕಾಲದಲ್ಲಿ

ಉಪಯೋಗದಲ್ಲಿದ್ದ ಕೆಲವು ಪದಗಳು ನಂತರದ ಸಂಸ್ಕೃತದಲ್ಲಿ ಇಲ್ಲವಾಗಿದೆ (ಉದಾ. ಅತ್ಕ (ವಸ್ತ್ರ) ಅಪಸ್ (ಕೆಲಸ) ಆಧ್ರ (ತುಚ್ಛ) ಆಪಿ (ಸ್ನೇಹಿತ) ಕ್ರವಿಷ್ (ಮಾಂಸ) ಗಾತು (ದಾರಿ) ಚನಸ್ (ತೃಪ್ತಿ) ಜನಿ (ಹೆಂಗಸು) ದಮ (ಮನೆ) ನೇಮ (ಅರ್ಧ) ಪಿತು (ಅನ್ನ). ಹಾಗೆಯೇ, ಏಕರೂಪದ ಪದಗಳಲ್ಲಿ ಒಂದು ನಷ್ಟವಾಗಿದೆ (ಉದಾ. ಅಸುರ (ಅಧಿಪತಿ) ಅಸುರ (ರಾಕ್ಷಸ) ಅರಿ (ವಿಶ್ವಾಸಾರ್ಹ) ಅರಿ (ಶತ್ರು) ಪಾಯು (ರಕ್ಷಿಸುವವ) ಪಾಯು (ಗುದ). ಪಾಣಿನಿಪೂರ್ವದ ಯಾಸ್ಕನು ತನ್ನ ನಿರುಕ್ತದಲ್ಲಿ ಪ್ರಭೇದಗಳಲ್ಲಿನ ಕೆಲವು ವ್ಯತ್ಯಾಸಗಳನ್ನು ಗುರುತಿಸಿದ್ದಾನೆ. ವೇದದಲ್ಲಿ ನ ಎಂಬುದು ಹೋಲಿಕೆ ಮತ್ತು ನಿಷೇಧ ಎಂಬೆರಡು ಅರ್ಥದಲ್ಲಿ ಉಪಯೋಗದಲ್ಲಿತ್ತು (ಉದಾ. ತಸ್ಮಾದ್ ಅಗ್ನಿಹೋತ್ರೀ ನಾನೃತಂ ವದೇತ್ "ಆದ್ದರಿಂದ ಅಗ್ನಿಹೋತ್ರಿಯು ಸುಳ್ಳಾಡಬಾರದು", ನ ವಿವಸನಂ ಸ್ನಾಯಾತ್ "ನಗ್ನನಾಗಿ ಸ್ನಾನ ಮಾಡಬಾರದು", ಸಿಂಧುಂ ನ ನಾವಾ ದುರಿತಾತಿಪರ್ಷಿ "ದೋಣಿಯ ಸಹಾಯದಿಂದ ನದಿಯನ್ನು ದಾಟುವಂತೆ", ನ ಯೋಷಾಮಭ್ಯೇತಿ ಪಶ್ಚಾತ್ "ಹೆಂಗಸಿನ ಹಿಂದೆ ಅನುಸರಿಸಿ ಹೋಗುವಂತೆ"; ಆದರೆ ನಂತರದ ಕಾಲದಲ್ಲಿ ಅದು ಕೇವಲ ನಿಷೇದಾರ್ಥದಲ್ಲಿ ಕಂಡುಬರುತ್ತದೆ. ಉದಾ. ಗುಣೆಷು ನ ಚ ಲಿಂಗಂ ನ ಚ ವಯಃ "ಗುಣವಂತರಲ್ಲಿ ವಯಸ್ಸಾಗಲೀ ಲಿಂಗವಾಗಲೀ ಮುಖ್ಯವಲ್ಲ". ಹಾಗೆಯೇ, ನು ಎಂಬುವುದು ವೇದದಲ್ಲಿ ಅನಿಶ್ಚಿತತೆ ಎಂಬರ್ಥದಲ್ಲಿದೆಯಾದರೆ, ನಂತರ ಅದು ಶ್ಲೋಕದ ಪಾದಪೂರಕವಾಗಿ ಉಳಿದಿದೆ, ಉದಾ. ಕದಾ ನ್ವಂತರ್ವರುಣೇ ಭವಾನಿ "ಯಾವಾಗ ವರುಣನೊಡನೆ ಸಂಪರ್ಕ ಪಡೆಯುತ್ತೇನೋ?" (ಅನಿಶ್ಚಿತತೆ), ಕಥಂ ನು ಗುಣವದ್ವಿಂದೇಯಂ ಕಲತ್ರಂ "ಹೇಗೆ ನಾನು ಗುಣವಂತೆಯಾದ ಹೆಂಡತಿಯನ್ನು ಪಡೆಯುವೆನು?" (ಪಾದಪೂರಕ),: ಕಿಂ ನ್ವೇತತ್ ಸ್ಯಾತ್ "ಇದೇನಿರಬಹುದು?" (ಪಾದಪೂರಕ). ಕುಡುಗೋಲು ಎಂಬರ್ಥದಲ್ಲಿ ದಾತ್ರ ಎಂಬ ಪದ ವಾಯವ್ಯ ಪ್ರದೇಶದಲ್ಲಿಯೂ, ಅದೇ ಶಬ್ದ ಪೂರ್ವದಿಕ್ಕಿನಲ್ಲಿ ದಾತಿಃ ಎಂದೂ ಉಪಯೋಗವಾಗುತ್ತಿತ್ತು. ವೇದ ಮತ್ತು ಸಂಸ್ಕೃತದ ಮಧ್ಯದ ಕಾಲಿಕವ್ಯತ್ಯಾಸದಂತೆ, ಸಂಸ್ಕೃತ ಮತ್ತು ನಂತರದ ಪ್ರಾಕೃತದ ಮಧ್ಯದ ವ್ಯತ್ಯಾಸ ಕೂಡ ಕಾಲಿಕವೇ, ಸಂಸ್ಕೃತದ ಋ-ಕಾರ ಪ್ರಾಕೃತಗಳಲ್ಲಿ ನಷ್ಟವಾಗಿ ಅದು ಅ, ಇ, ಉ, ಗಳಲ್ಲಿ ಹಂಚಿಕೆಯಾಗಿದೆ (ಉದಾ. ಕೃತ > ಕ-ಅ, ಋಷಿ>ಇಸಿ, ಮೃತ>ಮುಅ); ಐ/ಔಗಳು ಕ್ರಮವಾಗಿ ಎ/ಒ ಗಳಾಗಿವೆ (ಉದಾ. ಕೈವರ್ತ ಬೇಟೆಗಾರ > ಕೇವಟ್ಟ, ಔಷಧ > ಓಸಹ); ಸ್ವರಗಳಮಧ್ಯದ ಮಹಾಪ್ರಾಣ ಹ-ಕಾರಕವಾಗಿದೆ (ಉದಾ. ದಧಿ ಮೊಸರು > ದಹಿ, ಮೇಘ ಮೋಡ > ಮೋಹ); ಸ್, ಶ್, ಷ್ ಗಳ ಭೇದ ಹೋಗಿ ಎಲ್ಲವೂ ಸ ಎಂದು ತೋರಿಕೊಂಡಿವೆ (ಉದಾ. ಸಶೇಷ > ಸಸೇಸ); ಸಂಯುಕ್ತವ್ಯಂಜನಗಳು ಇಲ್ಲವಾಗಿದೆ (ಉದಾ. ಧರ್ಮ > ಧಮ್ಮ, ಭುಕ್ತಂ > ಭುತ್ತಂ, ಖಡ್ಗ > ಖಗ್ಗೋ); ದ್ವಿವಚನ ಇಲ್ಲವಾಗಿದೆ; ಚತುರ್ಥೀ ಮತ್ತು ಷಷ್ಠೀ ನಡುವಣ ಭೇದವಿಲ್ಲವಾಗಿದೆ.

ಪಾಣಿನಿಯೂ ಸಹ ತನ್ನ ವ್ಯಾಕರಣದಲ್ಲಿ ಪ್ರಾಂತೀಯ ಪ್ರಭೇದಗಳನ್ನು ಉಲ್ಲೇಖಿಸಿದ್ದಾನೆ (ಉದಾ. ೪.೨.೧೩೯ ಪ್ರಾಚಾಂ ಕಟಾದೇಃ; ೬.೨.೭೪ ಪ್ರಾಚಾಂ ಕ್ರೀಡಾಯಾಂ; ೪.೧.೧೫೩ ಉದೀಚಾಂ ಇಞ್; ೪.೨.೧೦೯ ಉದೀಚ್ಯ ಗ್ರಾಮಾಚ್ಚ ಬಹ್ವಚೋನ್ತೋದಾತ್ತಾತ್). ಗರ್ಗ ಶಬ್ದದ ತದ್ಧಿತರೂಪವಾದ ಗಾರ್ಗೀ ಎನ್ನುವುದು ಉತ್ತರದ ಪ್ರಭೇದದಲ್ಲಿಯೂ ಗಾರ್ಗ್ಯಾಯಣೀ ಎನ್ನುವ ರೂಪ ಪೂರ್ವದ ಪ್ರಭೇದದಲ್ಲೂ ಕಾಣಬರುತ್ತದೆ. ಹಕ್ಕಿ ಎನ್ನುವುದಕ್ಕೆ, ಪೂರ್ವದಲ್ಲಿ ವರ್ತಕಾ ಎಂದರೆ, ಉತ್ತರದಲ್ಲಿ ಅದನ್ನೇ ವರ್ತಿಕಾ ಎನ್ನುತ್ತಿದ್ದರು.

ಕ್ಷೇತ್ರೀಯ ಮತ್ತು ಕಾಲಿಕ ಪ್ರಭೇದಗಳೇ ಅಲ್ಲದೆ ಸಾಮಾಜಿಕ ಸ್ತರವನ್ನವಲಂಬಿಸಿ ಕೂಡ ಪ್ರಭೇದಗಳಿವೆ. ಭಿಕ್ಷೆ ಬೇಡುವಾಗ ಬ್ರಾಹ್ಮಣನು ಭವತಿ ಎಂಬ ಪದವನ್ನು ವಾಕ್ಯದ ಪ್ರಾರಂಭದಲ್ಲೂ (ಭವತಿ ಭಿಕ್ಷಾಂ ದೇಹಿ), ಕ್ಷತ್ರಿಯನು ಮಧ್ಯದಲ್ಲೂ (ಭಿಕ್ಷಾಂ ಭವತಿ ದೇಹಿ), ವೈಶ್ಯನು ಕಡೆಯಲ್ಲೂ (ಭಿಕ್ಷಾಂ ದೇಹಿ ಭವತಿ) ಪ್ರಯೋಗಿಸಬೇಕೆಂಬ ನಿಯಮವಿದೆ. ಒಬ್ಬರ ಕ್ಷೇಮವನ್ನು ವಿಚಾರಿಸುವಾಗ, ಬ್ರಾಹ್ಮಣನನ್ನು ಕುಶಲವೇ ಎಂದೂ, ಕ್ಷತ್ರಿಯನನ್ನು ಅನಾಮಯವೇ ಎಂದೂ, ವೈಶ್ಯನನ್ನು ಕ್ಷೇಮವೇ ಎಂದೂ, ಶೂದ್ರನನ್ನು ಆರೋಗ್ಯವೇ ಎಂದೂ ಕೇಳುತ್ತಿದ್ದರೆಂದು ಸ್ಮೃತಿಗಳಲ್ಲಿ ಹೇಳಿದೆ. ಸಂಬೋಧಿಸಿದವರು ಯಾರೆಂಬುದರ ಮೇಲೆ ಭಿನ್ನರೂಪದ ಸಂಬೋಧನಾಪದವನ್ನು ಉಪಯೋಗಿಸುವುದುಂಟು. ಅವರು ಹೆಂಗಸಾದರೆ, ಹಂಡೆ, ಹಂಜೆ ಮತ್ತು ಹಲಾ ಎಂಬ ಪದಗಳಿಂದ ಸಂಬೋಧನೆಯಾಗುತ್ತದೆ. (ಉದಾ. ಹಂಜೆ ರಮಿತುಂ ಇಚ್ಛಾಮಿ "ರಮಿಸಬಯಸುತ್ತೇನೆ" (ಚೇಟಿಯನ್ನು ಕುರಿತು), ಹಲಾ ಎಷ ತೇ ಕಂದುಕಃ "ಸಖಿ, ಇದೋ ನಿನ್ನ ಚೆಂಡು" (ಸ್ನೇಹಿತೆಯನ್ನು ಕುರಿತು). ಸಂಬೋಧಿಸಿದ ವ್ಯಕ್ತಿ ಗಂಡಸಾದರೆ, ಆಗ ರೆ, ಅರೆ, ಅರೆರೆ, ಎಂದು ಉಪಯೋಗಿಸುತ್ತಾರೆ (ಉದಾ. ಆಗಚ್ಛ ರೇ ಚಾರುದತ್ತ "ಚಾರುದತ್ತ, ಬಾ", ಅರೆ ಶೀಘ್ರಂ ಮಾರಯತ ಚಾರುದತ್ತಂ "ಚಾರುದತ್ತನನ್ನು ಬೇಗ ಕೊಲ್ಲಿರಿ", ಅರೆರೆ ರಾಧಾಗರ್ಭ ಭಾರಭೂತ" ಎಲೋ, ರಾಧೆಯ ಗರ್ಭಕ್ಕೆ ಭಾರವಾದವನೇ"). ಇವೇ ಅಲ್ಲದೇ ಒಬ್ಬನೇ ವ್ಯಕ್ತಿ ವಿವಿಧ ಪ್ರಸಂಗಗಳಲ್ಲಿ ಪದಗಳನ್ನು ಬೇರೆ ಬೇರೆ ರೂಪದಲ್ಲಿ ಉಪಯೋಗಿಸುತ್ತಾನೆ, ಉದಾ. ಶೂದ್ರನ ಹೆಂಡತಿಯೆನ್ನುವಾಗ ಶೂದ್ರೀ ಎಂದು, ಶೂದ್ರಜಾತಿಯ ಹೆಂಗಸೆನ್ನುವಾಗ ಶೂದ್ರಾ ಎಂದು ವ್ಯವಹರಿಸಬೇಕು. ಹಾಗೆಯೇ, ಹೆಂಡತಿಯಾದರೆ ಪಾಣಿಗೃಹೀತೀ, ಹಾಗಲ್ಲದೆ ಹೆಂಗಸೊಬ್ಬಳ ಕೈಯನ್ನು ಹಿಡಿದರೆ ಪಾಣಿಗೃಹೀತಾ; ಸಂಪತ್ತನ್ನಪೇಕ್ಷಿಸುವವಳಾದರೆ ಕಾಮುಕಾ, ಮೋಹಿಸುವವಳಾದರೆ ಕಾಮುಕೀ; ಕೆಲಸದವಳಾದರೆ ತಾರಿಕಾ, ನಕ್ಷತ್ರವಾದರೆ ತಾರಕಾ.

ಕೆಲವೊಮ್ಮೆ, ಪ್ರಭೇದಗಳಲ್ಲಿ ದೊರಕುವ ವಿವರಗಳಿಂದ ನಷ್ಟವಾಗಿರುವ ಅನ್ಯ ಪ್ರದೇಶಗಳ ಇರುವಿಕೆ ತಿಳಿಯುತ್ತದೆ. ಲಭ್ಯವಾಗಿರುವ ಸಂಸ್ಕೃತ ಪ್ರಭೇದದಲ್ಲಿ ಜೀರ್ಣ (ಜ್ರ್ಯಾ ಧಾತುವಿನ ಭೂತಕೃದಂತ) ಎಂಬ ರೂಪ ಸಿಗುತ್ತದೆ. ಆದರೆ ಅದರ ಮುಂದಿನ ಪ್ರಾಕೃತದಲ್ಲಿ ಜುಣ್ಣ ಎಂಬ ರೂಪವೂ ಅದರಿಂದ ಮುಂದೆ ಮರಾಠಿಯಲ್ಲಿ ಜೂನಾ ಎಂದೂ ದೊರಕುತ್ತದೆ. ಇದರಿಂದ ಜುಣ್ಣ ಎಂಬುದರ ಪೂರ್ವರೂಪವೆನ್ನುವ ಜೂರ್ಣ

ಎಂಬ ರೂಪವಿದ್ದ ಸಂಸ್ಕೃತ ಪ್ರಭೇದವಿದ್ದಿರಬೇಕೆನಿಸುತ್ತದೆ. ಸಂಸ್ಕೃತದ –ಅಸ್ ಕೆಲವು ಪ್ರಾಕೃತಗಳಲ್ಲಿ ಸಂಸ್ಕೃತದಂತೆಯೇ –ಓ ಎಂದಾಗುತ್ತದೆಯಾದರೆ (ನಲಸ್ + ನಾಮ = ನಲೋ ನಾಮ), ಇನ್ನು ಕೆಲವಲ್ಲಿ ಅದು –ಎ ಎಂದಾಗಿದೆ. ವೇದದಲ್ಲಿ ದೊರಕುವ ಒಂದೆರಡು ಉದಾಹರಣೆಗಳಿಂದ (ಸೂರೇ ದುಹಿತಾ ಸೂರ್ಯನ ಮಗಳು) ಅಂತಹ ರೂಪಗಳಿದ್ದ ಪ್ರಭೇದವಿದ್ದಿರಬೇಕೆನಿಸುತ್ತದೆ. ಸಂಸ್ಕೃತದ ತೀರ್ಥ ಪ್ರಾಕೃತದಲ್ಲಿ ತಿತ್ಥ ಎಂದಾಗುತ್ತದೆ. ಆದರೆ ಪ್ರಾಕೃತದಲ್ಲಿ ತೂಹ ಎಂಬ ರೂಪವೂ ಕಂಡುಬರುತ್ತದೆ. ಅದರ ಪೂರ್ವರೂಪವೆನಿಸುವ *ತೂರ್ಥ ಇದ್ದ ಪ್ರಭೇದವೊಂದಿದ್ದಿರಬೇಕು. ಹೀಗೆ ಪ್ರಭೇದಗಳ ಒಟ್ಟು ಅಧ್ಯಯನದಿಂದ ಭಾಷೆಯೊಂದರ ಪೂರ್ಣರೂಪದ ಪರಿಚಯ ಸಾಧ್ಯವಾಗುತ್ತದೆ. ಹಾಗೂ ಆ ಭಾಷೆಯ ಚರಿತ್ರೆಯನ್ನು ಬರೆಯಲು ಪೂರಕವಾಗುತ್ತದೆ.

■

# ಆಗಮಗಳ ಹಿನ್ನೆಲೆಯಲ್ಲಿ ಸಾಂಖ್ಯ ಮತ್ತು ಸಾಂಖ್ಯದರ್ಶನಗಳು

◆

ಎಂ.ಎಸ್. ಪ್ರಭಾಕರ್

ಆಗಮಗಳನ್ನು ಹೊಸ ದೃಷ್ಟಿಯಿಂದ ನೋಡುವ ಕಾಲ ಈಗ ಸನ್ನಿಹಿತವಾಗಿದೆ. ಇದಕ್ಕೆ ಕಾರಣ, ಈವರೆಗೆ ಆಗಮಗಳನ್ನು ಕುರಿತ ಅಧ್ಯಯನ ಹೆಚ್ಚು ಉಪೇಕ್ಷೆಗೊಳಗಾಗಿರುವುದು. ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಆಗಮಗಳಿಗಾಗಿ ಪ್ರತ್ಯೇಕ ಸ್ಥಾನವಿಲ್ಲ ಎಂದು ಗಮನಿಸಬಹುದು. ಸಾಹಿತ್ಯ ಚರಿತ್ರೆಯ ಅಧ್ಯಯನದಲ್ಲಿ ಮೊದಲಿಗೆ ವೈದಿಕ ಸಾಹಿತ್ಯ, ಅದರೊಂದಿಗೆ ವ್ಯಾಕರಣ, ಛಂದಸ್ಸು, ನಿರುಕ್ತ ಇತ್ಯಾದಿ; ನಂತರ ದರ್ಶನಗಳು, ಪುರಾಣಗಳು, ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಹೀಗೆ ಮುಂದುವರೆದಿದೆಯೇ ಹೊರತು ಆಗಮಗಳ ಉಲ್ಲೇಖವೂ ಇಲ್ಲ; ಆಗಮಗಳು ಒಂದು ರೀತಿಯ ಅವಗಣನೆಗೆ ಒಳಗಾಗಿವೆ. ಸಮಗ್ರ ಅಧ್ಯಯನವಂತೂ ಕನಸಿನ ಮಾತು.

ಆಗಮ ಎಂದರೇನು? ಇದು ನಮ್ಮ ಮುಂದಿರುವ ಮೊದಲ ಪ್ರಶ್ನೆ. ಆಗಮ ಪದವು 'ಗಮ್' ಧಾತು ಮೂಲದ್ದು. 'ಗತ್ಯರ್ಥಕಾನಾಂ ಜ್ಞಾನಾರ್ಥಕತ್ವಂ'–ಆಗಮಗಳೆಲ್ಲವೂ ಜ್ಞಾನಭಂಡಾರಗಳೇ ಆಗಿವೆ. ಆಗಮ, ತಂತ್ರ, ಸಂಹಿತೆ ಎಂಬ ಹೆಸರಿನ ಗ್ರಂಥ ಸಾಹಿತ್ಯವನ್ನೊಳಗೊಂಡಿದೆ. ಆಗಮದೊಂದಿಗೆ ಅದರ ಜ್ಞಾತಿಪದ, ನಿಗಮವನ್ನು ಗಮನಿಸತಕ್ಕದ್ದು. ನಿಗಮದ ಅಡಿಯಲ್ಲಿ ವೈದಿಕ ಸಾಹಿತ್ಯವಿದೆ. ಸಂಹಿತೆ, ಬ್ರಾಹ್ಮಣ, ಅರಣ್ಯಕ, ಉಪನಿಷತ್ತುಗಳನ್ನು ಇದರ ಅಡಿಯಲ್ಲಿ ಗುರುತಿಸುತ್ತಾರೆ. ನಿಗಮ ಸಾಹಿತ್ಯವು ಉಪನಿಷತ್ತುಗಳಿಂದ ಕೊನೆಗೊಳ್ಳುತ್ತದೆ. ಆದ್ದರಿಂದ ಉಪನಿಷತ್ತುಗಳನ್ನು ವೇದಾಂತವೆಂದು ಹೆಸರಿಸುತ್ತಾರೆ. ಉಪನಿಷತ್ತುಗಳ ನಂತರ ಆಗಮ ಸಾಹಿತ್ಯ ಪ್ರಾರಂಭ. ವೈದಿಕ ಸಾಹಿತ್ಯದ ನಂತರದ ಸಾಹಿತ್ಯವನ್ನು, ದರ್ಶನಗಳನ್ನು ಆಗಮಗಳೆನ್ನಬಹುದೇ?! ಆಗಮ, ನಿಗಮಗಳನ್ನು ಪ್ರತ್ಯೇಕಿಸಲು ಕಾರಣವೆನಿಸುವ ಅಂಶಗಳಾದರೂ ಏನು?

ಮಹಾಭಾರತ ಕಾವ್ಯದ ಶಾಂತಿಪರ್ವದಲ್ಲಿ, ಕಪಿಲ ಮತ್ತು ಸೂರ್ಯರಶ್ಮಿಯ ಸಂವಾದದಲ್ಲಿ ಆಗಮಗಳನ್ನು ಕುರಿತ ಒಂದು ಸೈದ್ಧಾಂತಿಕ ವಿವರಣೆ ಇದೆ; "ಆಗಮೋ

ವೇದವಾದಾಸ್ತು, ತರ್ಕ ಶಾಸ್ತ್ರಾಣಿ ಆಗಮಃ" ಆಗಮಗಳು ವೇದಪದ ಎನಿಸಿದ್ದು ತಾರ್ಕಿಕ ಸ್ವರೂಪವುಳ್ಳದ್ದು. ಇವು ನಿಗಮ ಸಾಹಿತ್ಯಕ್ಕಿಂತ ಹೇಗೆ ಭಿನ್ನ ?

ವೇದಾಂತವೆಂದು ಗುರುತಿಸಲಾದ ಉಪನಿಷತ್ ಸಾಹಿತ್ಯವು ಪ್ರಾತಿಭಾತ್ಮಕ ವಾದುದೆಂದು ಪರಿಗಣಿಸಲ್ಪಟ್ಟಿದೆ. ಉಪನಿಷತ್ತುಗಳ ನಂತರ ರೂಪುಗೊಂಡ ಆಗಮ ಸಾಹಿತ್ಯವು ತರ್ಕಬದ್ಧವಾದದ್ದು. ಸಾಂಖ್ಯ, ಯೋಗ, ವೈಶೇಷಿಕ ದರ್ಶನಗಳು ತತ್ತ್ವಗಳನ್ನು ಅವಲಂಬಿಸಿವೆ. ಆದ್ದರಿಂದ ತಾತ್ತ್ವಿಕ ದರ್ಶನಗಳೆನಿಸಿವೆ; ಸಾಂಖ್ಯ ಯೋಗಾದಿ ದರ್ಶನಗಳನ್ನು ಆಗಮಗಳ ಪ್ರಾರಂಭವೆಂದೇ ಗುರುತಿಸಬೇಕು. ವೈದಿಕ ಹಾಗೂ ಆಗಮಗಳ ಲಕ್ಷಣಗಳನ್ನು, ಮೂಲ ಉದ್ದೇಶವನ್ನು ತುಲನಾತ್ಮಕವಾಗಿ ಪರಿಶೀಲಿಸಿದಲ್ಲಿ ಈ ವಿಷಯಗಳು ಸ್ಪಷ್ಟಗೊಳ್ಳುತ್ತವೆ.

ವೈದಿಕ ಸಾಹಿತ್ಯದಲ್ಲಿ ಪರಬ್ರಹ್ಮನೇ ಲಕ್ಷ್ಯ. ಪರಬ್ರಹ್ಮನನ್ನು ಕುರಿತ ವಿಪುಲವಾದ ಚರ್ಚೆ ಇದೆ. ಆಗಮ ಸಾಹಿತ್ಯದಲ್ಲಿ ಪರಮಾತ್ಮನೇ ಲಕ್ಷ್ಯ. ಆತ್ಮ, ಪರಮಾತ್ಮರ ನಡುವಣ ಸಂಬಂಧದ ಬಗ್ಗೆ ವ್ಯಾಪಕವಾದ ಚರ್ಚೆ ಇದೆ.

ವೈದಿಕ ಸಾಹಿತ್ಯದಲ್ಲಿ ಸೃಷ್ಟಿ, ಅಸತ್‌ನಿಂದ ಪ್ರಾರಂಭವಾಗುತ್ತದೆ. ಆಗಮ ಸಾಹಿತ್ಯದಲ್ಲಿ ಅವ್ಯಕ್ತದಿಂದ ಆರಂಭಗೊಳ್ಳುತ್ತದೆ. ಯಜ್ಞಯಾಗಾದಿಗಳನ್ನು ಒಳಗೊಂಡದ್ದು ವೈದಿಕ. ಮೂರ್ತಿಪೂಜೆಯನ್ನು ಒಳಗೊಂಡದ್ದು ಆಗಮಿಕ. ತಪಸ್ಸು, ಸ್ವಾಧ್ಯಾಯ, ದಾನ ಮೊದಲಾದವುಗಳಿಗೆ ವೈದಿಕ ಸಾಹಿತ್ಯದಲ್ಲಿ ಮಹತ್ವವಾದ ಸ್ಥಾನವಿದೆ. ವಿಗ್ರಹಾರಾಧನೆ ಆಗಮ ಸಂಪ್ರದಾಯದ್ದು. ಇಲ್ಲಿ ಸ್ವಾರ್ಥ, ಪರಾರ್ಥ ಎಂದು ಎರಡು ವಿಧ. ತನಗಾಗಿ ಸ್ವಗೃಹದಲ್ಲಿ ಆಚರಿಸಿದ್ದು ಸ್ವಾರ್ಥ. ಪರರಿಗಾಗಿ ದೇವಾಲಯಗಳಲ್ಲಿ ಆಚರಿಸಿದ್ದು ಪರಾರ್ಥ. ವರ್ಣಾಶ್ರಮದ ನಿಯಮಗಳು ವೈದಿಕಾಚರಣೆಯಲ್ಲಿವೆ. ಉಪನಯನದ ಮೂಲಕ ಜ್ಞಾನ ಪಡೆಯಲು ಅರ್ಹನಾಗುತ್ತಾನೆ. ಆಗಮ ಸಂಪ್ರದಾಯದಲ್ಲಿ ದೀಕ್ಷೆ ಇದೆ. ದೀಕ್ಷೆಯ ಮೂಲಕ ಆಗಮ ಸಂಪ್ರದಾಯಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿದೆ. ದರ್ಶನಗಳು ಆಗಮಗಳ ಆರಂಭದ ಸೋಪಾನಗಳು. ಸಾಂಖ್ಯ ದರ್ಶನಗಳ ಮೂಲಕ ಆಗಮಗಳ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಸಾಂಖ್ಯದಲ್ಲಿ ಮೊದಲಿಗೆ ಪರಮಾತ್ಮನಿಲ್ಲ. ಇದು ನಿರೀಶ್ವರ ಸಾಂಖ್ಯ. ನಂತರ ಪರಮಾತ್ಮನಿದ್ದಾನೆ. ಇದು ಸೇಶ್ವರ ಸಾಂಖ್ಯ. ಇವೆರಡನ್ನು ಕುರಿತ ತಾತ್ತ್ವಿಕ ಜಿಜ್ಞಾಸೆ ಇದೆ. ಪರಮಾತ್ಮನ ಇರುವು ಮೊದಲಿಗೆ ನಿರಾಕಾರ; ನಂತರ ಸಾಕಾರ ರೂಪ ಪಡೆಯುತ್ತದೆ. ಪರಮಾತ್ಮನ ಇರುವನ್ನು ಅಂಗೀಕರಿಸಿದ್ದರಿಂದ ಅವನ ಆರಾಧನೆ ಹಲವು ರೂಪಗಳನ್ನು ಪಡೆಯುತ್ತದೆ. ಚಿಂತನೆ, ಧ್ಯಾನ, ಯೋಗಗಳಿಂದ ಆರಂಭವಾಗುವ ಈ ಸೋಪಾನಗಳು, ಒಂದು ಹಂತದಲ್ಲಿ ಧ್ಯಾನಕ್ಕೆ ಅವಲಂಬನೆಯನ್ನು ಅಪೇಕ್ಷಿಸುತ್ತದೆ. ಪರ್ಯಾಯವಾಗಿ ಪ್ರತಿಮಾ ರೂಪವನ್ನು ಪುರಸ್ಕರಿಸುತ್ತದೆ. ಈ ರೂಪ ವಿಗ್ರಹಾರಾಧನೆಯ ಮೂಲಕ ಆಗಮ ಸಾಹಿತ್ಯದಲ್ಲಿ ಅಂತಿಮವಾಗಿ ಪ್ರಕಟಗೊಳ್ಳುತ್ತದೆ. ಆಗಮ ಗ್ರಂಥಗಳೆಂದರೆ ಇಂದು ದೇವಾಲಯ ರಚನೆ, ಪ್ರತಿಷ್ಠಾಪನೆ, ಪ್ರತಿಮಾ ರಚನೆ, ಪ್ರತಿಷ್ಠಾಪನೆ, ದೇವಾಲಯಗಳಲ್ಲಿ ನಡೆಯುವ ನಿತ್ಯ, ನೈಮಿತ್ತಿಕ ಕೈಂಕರ್ಯಗಳು,

ಆಚರಣೆಗಳು, ವರ್ಷ ಪೂರ್ತಿ ನಡೆಯುವ ಉತ್ಸವಾದಿಗಳು, ಇವುಗಳ ಬಗ್ಗೆ ತಿಳುವಳಿಕೆ ನೀಡುವ ಗ್ರಂಥಗಳೆಂದೇ ಪ್ರಸಿದ್ಧಗೊಂಡಿವೆ. ಈ ಸಾಹಿತ್ಯ ಸುಮಾರು ೮-೯ನೆಯ ಶತಮಾನದಿಂದ ಆರಂಭಗೊಂಡು ಹದಿನಾಲ್ಕನೆಯ ಶತಮಾನದವರೆಗೆ ವ್ಯಾಪಕವಾಗಿ ಬೆಳೆದಿದೆ. ತದನಂತರ ಕಾಲದ ರಚನೆಗಳೂ ಉಂಟು. ಆಗಮಗ್ರಂಥಗಳು ದಕ್ಷಿಣ ಭಾರತದ ಕೊಡುಗೆ ಎನ್ನುವುದು ಸ್ಪಷ್ಟ ಉತ್ತರ ಭಾರತದಲ್ಲಿ ಪುರಾಣಗಳು ರಚನೆಗೊಂಡಂತೆ ದಕ್ಷಿಣದಲ್ಲಿ ಆಗಮ ಗ್ರಂಥಗಳಿವೆ. ಉತ್ತರ ಭಾರತದಲ್ಲಿ ತೀರ್ಥಕ್ಷೇತ್ರಗಳಿಗೇ ಹೆಚ್ಚು ಮಹತ್ವ, ದಕ್ಷಿಣದಲ್ಲಿ ಆ ಸ್ಥಾನವನ್ನು ದೇವಾಲಯಗಳು ತುಂಬಿವೆ.

ಉತ್ತರದ ಪುರಾಣೋಕ್ತ ಪೂಜೆ ವೈಯಕ್ತಿಕ ಮೂಲದ್ದು. ದಕ್ಷಿಣದಲ್ಲಿ ಆಗಮೋಕ್ತ ಪರಾರ್ಥ ಪೂಜೆ ಸಮಾಜಮುಖಿ ಎನಿಸಿದೆ. ಉತ್ತರದಲ್ಲಿ ದೇವತಾ ವಿಗ್ರಹವನ್ನು ಸ್ಪರ್ಶಿಸಿ ಧನ್ಯತೆಯನ್ನು ಅನುಭವಿಸಬಹುದು. ದಕ್ಷಿಣದಲ್ಲಿ ಅರ್ಚಕನ ಮೂಲಕವೇ ಪೂಜಾದಿ ಕೈಂಕರ್ಯಗಳು. ಉತ್ತರದ ತೀರ್ಥಕ್ಷೇತ್ರಗಳಲ್ಲಿ ನಾಲ್ಕಾರು ವರ್ಷಕ್ಕೊಮ್ಮೆ ನಡೆಯುವ ಕುಂಭಮೇಳಗಳಿವೆ. ದಕ್ಷಿಣದ ದೇವಾಲಯಗಳಲ್ಲಿ ಪ್ರತಿವರ್ಷ ನಡೆಯುವ ಬ್ರಹ್ಮೋತ್ಸವಾದಿಗಳಿವೆ. ದೇವರು, ದೇವಾಲಯಗಳಿಗೆ ಸಂಬಂಧಿಸಿದ ಆಚಾರ ವಿಚಾರಗಳು ಆಗಮ ಗ್ರಂಥಗಳಲ್ಲಿ ಘಟ್ಟಿಗೊಂಡು ಧಾರ್ಮಿಕ ಸ್ವರೂಪ ಪಡೆಯಿತು. ಧಾರ್ಮಿಕ ರೂಪದಿಂದಾಗಿ ಹಲವು ಗ್ರಂಥಗಳು ಸುರಕ್ಷಿತವಾಗಿವೆ. ಕೆಲವು ಗ್ರಂಥಗಳು ಮುದ್ರಣ ಭಾಗ್ಯವನ್ನೂ ಪಡೆದಿವೆ. ಒಂದು ಹಂತದಲ್ಲಿ ಆಗಮ ಗ್ರಂಥಗಳಲ್ಲಿ ನಾಲ್ಕು ಪಾದಗಳಿರಬೇಕೆಂದು ನಿರ್ದೇಶಿಸಲಾಯಿತು. ಅವು ಜ್ಞಾನ, ಯೋಗ, ಕ್ರಿಯಾ, ಚರ್ಯಾಪಾದಗಳು. ಆದರೆ ಇಂದು ಆಗಮಗಳಲ್ಲಿ ಕ್ರಿಯಾ ಮತ್ತು ಚರ್ಯಾ ಪಾದಗಳಿಗೇ ಆಗಮಿಕರು ಹೆಚ್ಚು ಮಹತ್ವ ನೀಡಿದ್ದಾರೆ; ವಿಗ್ರಹಾರಾಧನೆ, ಗೃಹಾರ್ಚನೆ, ಆಲಯಾರ್ಚನೆಗಳೇ ಪ್ರಧಾನವೆನಿಸಿವೆ.

ಆರಂಭದ ಜ್ಞಾನ ಮತ್ತು ಯೋಗ ಪಾದಗಳು, ಸಾಂಖ್ಯ ಮತ್ತು ಯೋಗವನ್ನು ಕುರಿತದ್ದು. ಸಾಂಖ್ಯ ಮತ್ತು ಯೋಗದರ್ಶನಗಳಿಗೆ ನಿರೀಶ್ವರ ಮತ್ತು ಸೇಶ್ವರ ಸಾಂಖ್ಯ ಪರ್ಯಾಯ ಪದಗಳು. ತತ್ತ್ವಗಳನ್ನು ರೂಪಿಸುವಲ್ಲಿ ಈ ಪರ್ಯಾಯ ಪದಗಳನ್ನು ಪಡೆದಿವೆ. ಇವು ಭಗವಂತನ ಆರಾಧನೆಯ ಮೊದಲ ಮೆಟ್ಟಿಲುಗಳೆಂದು ತಿಳಿದಿದ್ದೇವೆ. ಸಾಕಾರರೂಪಿ ಭಗವಂತನನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಮುಂಚೆ ನಿರೀಶ್ವರ ವಾದವನ್ನೂ ಅರ್ಥ ಮಾಡಿಕೊಳ್ಳಬೇಕು. ಇದನ್ನು ತಿಳಿಯದೆ ಆಗಮ ಗ್ರಂಥಗಳಲ್ಲಿರುವ ಜ್ಞಾನಪಾದ, ಯೋಗ ಪಾದಗಳು ಉಪೇಕ್ಷೆಗೆ ಒಳಗಾಗಿವೆ. ಸಾಂಖ್ಯದ ತರ್ಕ, ಯೋಗದ ಸಾಧನೆಯ ಮಾರ್ಗಗಳು ಕ್ಲಿಷ್ಟವೆಂಬ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಸುಲಭವೆನಿಸುವ ಸಾಕಾರರೂಪಿ ಆರಾಧನೆ ವಿಜೃಂಭಿಸಿದೆ. ಆಗಮಗಳ ಜ್ಞಾನ, ಯೋಗ ಪಾದಗಳನ್ನು ಕಡೆಗಣಿಸಿವೆ. ಲಭ್ಯವಿರುವ ಮಾಹಿತಿ ವಿವರಗಳೂ ಅತ್ಯಲ್ಪ. ತಾತ್ತ್ವಿಕ ವಿವರಗಳು ಔಪಚಾರಿಕ ಎನಿಸಿ, ಪುರಾಣಾದಿ ವಿವರಗಳು ಈ ಸ್ಥಳವನ್ನು ಆಕ್ರಮಿಸಿವೆ. ಇದರಿಂದ ಆಗಮಗಳ ಸ್ವರೂಪ ಬದಲಾಗಿದೆ. ಇಂದು ಆಗಮಗಳ ಅಧ್ಯಯನವನ್ನು ಪುನಃ ಸಾಂಖ್ಯ, ಯೋಗಗಳೊಂದಿಗೆ ಆರಂಭಿಸಬೇಕಾಗಿದೆ.

**ಸಾಂಖ್ಯ ಮತ್ತು ಸಾಂಖ್ಯ ದರ್ಶನಗಳು**

ಭಾರತೀಯ ದರ್ಶನಗಳ ಬೆಳೆವಣಿಗೆಯನ್ನು ನಿರ್ದಿಷ್ಟವಾಗಿ ಮೂರು ಹಂತಗಳಲ್ಲಿ ವಿದ್ವಾಂಸರು ಗುರುತಿಸಿದ್ದಾರೆ. ಮೊದಲಿಗೆ ಒಬ್ಬ ಋಷಿಯೋ, ಮಹಾತ್ಮನೋ, ಪರತತ್ತ್ವದ ಸಾಕ್ಷಾತ್ಕರಕ್ಕೆ ಒಂದು ಅಭಿವ್ಯಕ್ತಿ ನೀಡುತ್ತಾನೆ. ಈ ದರ್ಶನಕ್ಕೆ ಅವನ ಪ್ರಜ್ಞಾವಂತ ಸ್ಫೂರ್ತಿಯೇ ಆಧಾರ; ಪ್ರತಿಯೊಂದು ದರ್ಶನದ ಉಗಮದ ಹಿಂದೆ, ಹಲವಾರು ವರ್ಷಗಳ ನಿರಂತರ ಚಿಂತನೆ, ಮಂಥನಗಳ ಹಿನ್ನೆಲೆ, ಪರಿಸರ ಪ್ರಭಾವ, ಇತಿಹಾಸಗಳಿರುತ್ತವೆ. ಇದು ಕ್ರಮಬದ್ಧಗೊಳ್ಳುವುದು ಎರಡನೆಯ ಹಂತ. ಆಗ ಖಚಿತ ದಾರ್ಶನಿಕ ಪದ್ಧತಿ ರೂಪುಗೊಳ್ಳುತ್ತದೆ. ಮುಂದೆ ಅದರ ವಿಸ್ತೃತಿ, ಅಂತರಾರ್ಥ ಗ್ರಹಿಕೆ, ಅನುಭವಜನ್ಯ ಪ್ರಯೋಗ, ಅಸಂಗತ ವಿಷಯಗಳ ನಿವಾರಣೆ, ಹೀಗೆ ಹಲವಾರು ಹಂತಗಳನ್ನು ದಾಟಿ ಪುಟವಿಟ್ಟ ಚಿನ್ನದಂತಾಗುತ್ತದೆ. ಅರ್ಥ ಖಚಿತತೆಗಾಗಿ ಖಂಡನೆ–ಮಂಡನೆಗಳು, ಟೀಕೆ–ಟಿಪ್ಪಣಿಗಳು, ಇವುಗಳೊಂದಿಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತದೆ. ಇದು ಮೂರನೆಯ ಹಂತ. (ಮೂರ್ತಿ ಟಿ.ಆರ್.ವಿ. ೧೯೭೩.೧೯) ತಾತ್ತ್ವಿಕವಾಗಿ ಈ ಹಂತಗಳನ್ನು ಸೂಚನಾತ್ಮಕ, ಕ್ರಮಯುಕ್ತ, ಶಾಸ್ತ್ರ ಬದ್ಧ ಎಂದು ವಿವರಿಸುತ್ತಾರೆ. ಇದನ್ನೇ ಸಪ್ರಮಾಣ, ಪವಿತ್ರೀಕರಣ, ಶಾಸ್ತ್ರ ಮತ್ತು ಟೀಕೆ ಎಂದೂ ಗುರುತಿಸುತ್ತಾರೆ. ಪ್ರತಿಯೊಂದು ದರ್ಶನಗಳು, ಸಿದ್ಧಾಂತಗಳು ಘಟ್ಟಿಗೊಳ್ಳಲು ಕೆಲವು ಶತಮಾನಗಳಾದರೂ ಬೇಕು (ಅದೇ.,).

ಇದು ದರ್ಶನಗಳ ಬೆಳವಣಿಗೆಯ ವಿವಿಧ ಹಂತಗಳ ವಿವರಗಳಾದರೆ, ದರ್ಶನಗಳ ಉಗಮಕ್ಕೆ ಕಾರಣವೆನಿಸಿದ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳಬೇಕು. ದರ್ಶನಗಳಿಗೆ ಮುನ್ನ ಉಪನಿಷತ್ತುಗಳು ಸಂಕಲನಗೊಂಡವು. ಉಪನಿಷತ್ತುಗಳು ವೈದಿಕ ಕರ್ಮಕಾಂಡದ ವೈಪರೀತ್ಯವನ್ನು ಹೋಗಲಾಡಿಸಲು, ವಾತಾವರಣವನ್ನು ತಿಳಿಯಾಗಿಸಲು ವೇದಭಾಗದಿಂದ ಆಯ್ದ ಪ್ರಾತಿಭಾತ್ಮಕ ಸಂಕಲನಗಳು. ಅಂದು ತತ್ತ್ವಗಳನ್ನಾಧರಿಸಿದ ತಾರ್ಕಿಕ ರೂಪದ ಸಾಹಿತ್ಯದ ಅವಶ್ಯಕತೆ ಇತ್ತು. ಇದಕ್ಕೆ ಪೂರಕವಾಗಿ ದರ್ಶನಗಳು ನಿಧಾನವಾಗಿ ಅಡಿ ಇರಿಸಿದವು. ಇವು ವೇದಗಳೊಂದಿಗೆ ನೆಂಟನ್ನೂ ಕಳೆದುಕೊಳ್ಳದೆ ಹೆಜ್ಜೆ ಹಾಕಿದವು. ವೇದಗಳ ಪರಬ್ರಹ್ಮ ಸ್ವರೂಪಕ್ಕೆ ಪರ್ಯಾಯವಾಗಿ ಪರಮಾತ್ಮನನ್ನು ರೂಪಿಸಿದವು. ಈ ಹಂತದಲ್ಲಿ ನಿರೀಶ್ವರ ಸಾಂಖ್ಯ ಮತ್ತು ಸೇಶ್ವರ ಸಾಂಖ್ಯಗಳು ಬೆಳಕಿಗೆ ಬಂದವು. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ದರ್ಶನಗಳ ಅಧ್ಯಯನ ಕೈಗೊಳ್ಳುವ ವಿದ್ವಾಂಸರಿಂದ ಆಗಮ ಶಾಸ್ತ್ರಗಳು ದೂರವೆನಿಸಿತು. ಆಗಮಶಾಸ್ತ್ರಗಳನ್ನು ಅಭ್ಯಸಿಸುವ ವಿದ್ವಾಂಸರು ಆಗಮಗಳ ಮೂಲದ ಬಗ್ಗೆ ಕಿಂಚಿತ್ತೂ ಗಮನ ಹರಿಸಲಿಲ್ಲ; ಕಾರಣ, ದರ್ಶನಗಳಿಗೆ ತತ್ತ್ವಗಳು ಪ್ರಧಾನವಾದರೆ, ಆಗಮಗಳು ಆಚರಣೆಗೆ ಹೆಚ್ಚು ಒಲವು ತೋರಿದ್ದು. ಈಗ ಇವೆರಡೂ ಪರಸ್ಪರ ಪೂರಕವೆನುವಂತೆ ಅಧ್ಯಯನ ಕೈಗೊಳ್ಳಬೇಕಾಗಿದೆ. ದರ್ಶನಗಳ ಪ್ರಾಚೀನ ಉಲ್ಲೇಖಕ್ಕೆ ಮಹಾಭಾರತ ಕಾವ್ಯವನ್ನೇ ಆಶ್ರಯಿಸಬೇಕು. ಪ್ರಸ್ತುತ ಲಭ್ಯವಿರುವ ಮಹಾಭಾರತ ಕಾವ್ಯದಲ್ಲಿರುವ ವಿವರಗಳನ್ನು ಪರೀಕ್ಷಿಸಿ, ವಿದ್ವಾಂಸರು ಇದರ ಕಾಲವನ್ನು ಕ್ರಿ.ಪೂ. ನಾಲ್ಕನೆಯ ಶತಮಾನದಿಂದ ಕ್ರಿ.ಶ.

ನಾಲ್ಕನೆಯ ಶತಮಾನದವರೆಗೆ ಎಳೆದೊಯ್ದಿದ್ದಾರೆ. ಅಂದರೆ, ಈ ಕಾಲಘಟ್ಟದ ಹಲವಾರು ವಿದ್ಯಮಾನಗಳು ಈ ಕಾವ್ಯದಿಂದ ಲಭ್ಯವಿದೆ. ಆದ್ದರಿಂದ ಖಚಿತ ಕಾಲ ಗುರುತಿಸಲು ಸಾಧ್ಯವಾಗದು. ಸಾಂಖ್ಯ ಮತ್ತು ಯೋಗಗಳ ಬಗ್ಗೆ ಪೂರ್ಣ ಮಾಹಿತಿ ಈ ಕಾವ್ಯದಿಂದಲೇ ಲಭ್ಯ. ಮಹಾಭಾರತವೇ ಮೂಲ ಆಕರ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಸಾಂಖ್ಯ, ಯೋಗ, ಲೋಕಾಯತಗಳ ಉಲ್ಲೇಖವಿದೆ. ಇದರ ಕಾಲ ಕ್ರಿ.ಪೂ. ಮೂರನೆಯ ಶತಮಾನ. ಮಹಾಭಾರತವನ್ನು ದರ್ಶನಗಳ ಕಾಲದ ಅಭಿವ್ಯಕ್ತಿ ಎಂದೂ ಗುರುತಿಸಬಹುದು. ಈ ದರ್ಶನಗಳ ತಾತ್ತ್ವಿಕ ವಿಚಾರಗಳನ್ನು ಪ್ರತಿ ಹಂತದಲ್ಲಿಯೂ ಇಲ್ಲಿ ಕಾಣಬಹುದು.

ಸಾಂಖ್ಯ ಯೋಗಂ ಪಾಂಚರಾತ್ರಂ ವೇದಾರಣ್ಯಕಮೇವ ಚ
ಜ್ಞಾನಾನಿ ಏತಾನಿ ಬ್ರಹ್ಮರ್ಷೇ ಲೋಕೇಷು ಪ್ರಚರಂತಿಹ

–ಸಾಂಖ್ಯ, ಯೋಗ, ಪಾಂಚರಾತ್ರ, ವೇದಾರಣ್ಯಕ(?) ಗಳೆಂಬ ಜ್ಞಾನಗಳು ಈ ಲೋಕದಲ್ಲಿ ಪ್ರಚಲಿತದಲ್ಲಿವೆ. ಇದು ಮಹಾಭಾರತ ಕಾವ್ಯದ ಉಲ್ಲೇಖ (ರಂಗಸ್ವಾಮೀ ೧೯೯೦, ೩೩೪೭/೨೬). ಈ ಸ್ವರೂಪದ ಉಕ್ತಿಯು ಮತ್ತೊಮ್ಮೆ ಈ ಕಾವ್ಯದಲ್ಲಿ ಪುನರಾವರ್ತನೆಗೊಂಡಿದೆ. ಸಾಂಖ್ಯ ಯೋಗಗಳು ದರ್ಶನಗಳು. ಪಾಂಚರಾತ್ರವು ಆಗಮ ಸಂಪ್ರದಾಯವೆಂದೇ ಪ್ರಸಿದ್ಧ. 'ವೇದಾರಣ್ಯಕ' ಎನ್ನುವುದು ಅಸ್ಪಷ್ಟ. ಇದು ವೈಖಾನಸಕ್ಕೆ ಪರ್ಯಾಯವೇ? 'ವೈಖಾನಸೋ ವಾನಪ್ರಸ್ಥಃ' ಎಂಬ ಉಕ್ತಿ ಇದೆ. ವಾನಪ್ರಸ್ಥರು ಅರಣ್ಯವಾಸಿಗಳು. ಆರಂಭದಲ್ಲಿ ವೈಖಾನಸರು ಅರಣ್ಯವಾಸಿಗಳಾಗಿದ್ದರು. 'ವೈಖಾನಸವು ಅತಿ ಪ್ರಾಚೀನ ಸಂಪ್ರದಾಯ; ವೈದಿಕ ಮೂಲದ್ದು. ವೈಖಾನಸ ಮತ್ತು ಪಾಂಚರಾತ್ರ. ಇವೆರಡೂ ಶಿಷ್ಟ ಸಂಪ್ರದಾಯಗಳು. ಒಂದು ವೇದ ಮೂಲದ್ದು, ಮತ್ತೊಂದು ತಾತ್ತ್ವಿಕ/ತಾಂತ್ರಿಕ ಮೂಲದಿಂದ ಉದಯಿಸಿದ್ದು. ಆರಂಭದ ವೈಖಾನಸ ಸಂಪ್ರದಾಯವನ್ನು ವೇದಾರಣ್ಯಕ ಎಂದಿರಲು ಸಾಧ್ಯವೇ ? ಖಚಿತ ಮಾಹಿತಿ ದೊರಕುವವರೆಗೆ ಇದು ಊಹಾತ್ಮಕ.

ಯ ದೇವ ಯೋಗಾಃ ಪಶ್ಯಂತಿ ಸಾಂಖ್ಯೈಸ್ತದನುಗಮ್ಯತೇ
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಬುದ್ಧಿಮಾನ್

–ಯೋಗವು ಯಾವ ದೃಷ್ಟಿಯುಳ್ಳದ್ದೋ ಅದನ್ನೇ ಸಾಂಖ್ಯವೂ ಅನುಸರಿಸುತ್ತದೆ. ಆದ್ದರಿಂದ ಸಾಂಖ್ಯ, ಯೋಗಗಳಿಂದ ದೊರಕುವ ಫಲ ಒಂದೇ ಎನಿಸಿದೆ (ರಂಗಸ್ವಾಮೀ, ೧೯೮೨, ೨೮೧೫/೨೫). ಈ ರೀತಿಯ ಅಭಿಪ್ರಾಯವು ಮಹಾಭಾರತ ಕಾವ್ಯದಲ್ಲಿ ಹಲವಾರು ಬಾರಿ ವ್ಯಕ್ತಗೊಂಡಿದೆ. ಇವೆರಡೂ ದರ್ಶನಗಳ ಲಕ್ಷ್ಯ ಮೋಕ್ಷವೇ. ತಾತ್ತ್ವಿಕವಾಗಿ ಭಿನ್ನ. ಸಾಂಖ್ಯ ಎಂದಲ್ಲಿ ತಾತ್ತ್ವಿಕ ಮೂಲದ ಆಲೋಚನೆ ಮೂಡುವುದು ಸಹಜ. ಯೋಗ ಎಂದಲ್ಲಿ ಸಾಧನೆ. ತತ್ತ್ವದೃಷ್ಟಿಯಿಂದ ಮೊದಲು ಎರಡನ್ನೂ ತಿಳಿದುಕೊಳ್ಳಬೇಕು. ಈ ಹಂತದಲ್ಲಿ ನಿರೀಶ್ವರ ಸಾಂಖ್ಯ, ಸೇಶ್ವರ ಸಾಂಖ್ಯ ಎಂಬ ಪರ್ಯಾಯ ಪದಗಳ ಬಳಕೆ ಲೇಸು.

ಸಾಂಖ್ಯ ದರ್ಶನವು ಪ್ರಾಚೀನವೆಂಬ ಅಭಿಪ್ರಾಯವಿದೆ. ಆದರೆ ಸಾಂಖ್ಯ ಯೋಗಗಳ ಸಂಬಂಧ ಬೀಜವೃಕ್ಷ ನ್ಯಾಯದಂತೆ ಗಲಿಬಿಲಿಗೊಳಿಸುತ್ತದೆ. ಸಾಧನೆ ಮೊದಲು, ನಂತರ ಅದಕ್ಕೊಂದು ತಾತ್ತ್ವಿಕ ಸ್ವರೂಪದ ಕವಚ ತೊಡಿಸುವಿಕೆ. ಪ್ರಾಚೀನ ಸಾಂಖ್ಯ ಸ್ವರೂಪವನ್ನು ಗುರುತಿಸಲು ಸಾಧ್ಯವಾಗಿಲ್ಲ. ನಿರೀಶ್ವರ ಸಾಂಖ್ಯದ ತಾತ್ತ್ವಿಕ ಚಿಂತನೆಯನ್ನು ಅನುಷ್ಠಾನಗೊಳಿಸುವ ಯತ್ನ ಅಷ್ಟು ಸುಲಭವಲ್ಲ. ಸಾಂಖ್ಯ ಯೋಗ ದರ್ಶನಗಳು ಮೊದಲಿನಿಂದ ಪರಸ್ಪರ ಪೂರಕ ಎನ್ನುವಂತೆ ಬೆಳೆದಿವೆ. ಇವುಗಳನ್ನು ವಿಶದವಾಗಿ ಪರೀಕ್ಷಿಸಬೇಕು.

ಸಾಂಖ್ಯ ದರ್ಶನಕ್ಕೆ ಸಂಬಂಧಿಸಿದಂತೆ ಈಶ್ವರಕೃಷ್ಣನ "ಸಾಂಖ್ಯಕಾರಿಕಾ" ಪ್ರಮಾಣ ಗ್ರಂಥ. ಯೋಗದರ್ಶನಕ್ಕೆ ಸಂಬಂಧಿಸಿದಂತೆ ಪತಂಜಲಿಯ "ಯೋಗಸೂತ್ರಗಳು" ಪ್ರಮಾಣ ಗ್ರಂಥ. ಇವೆರಡೂ ಕ್ರಿಸ್ತಶಕ ಮೂರು ನಾಲ್ಕನೆಯ ಶತಮಾನದ ರಚನೆಗಳು. ಇವುಗಳ ಪೂರ್ವದಲ್ಲಿದ್ದ ದರ್ಶನಗಳ ಸ್ವರೂಪವನ್ನು ತಿಳಿಯಬೇಕು. ಈ ಸ್ವರೂಪವನ್ನು ಗುರುತಿಸುವಲ್ಲಿ ಮಹಾಭಾರತ ಮತ್ತು ಉಪನಿಷತ್ತುಗಳೇ ಆಧಾರ. ದರ್ಶನಗಳ ಉಗಮಕ್ಕೆ ಉಪನಿಷತ್ತುಗಳ ಕೊಡುಗೆಯೂ ಇದೆ ಎಂದು ಗಮನಿಸಬೇಕು. ಈ ದರ್ಶನಗಳನ್ನು ಪ್ರತ್ಯೇಕವಾಗಿ ನೋಡುವುದಕ್ಕಿಂತ ತುಲನಾತ್ಮಕವಾಗಿ ಗುರುತಿಸುವುದೇ ಸಮಂಜಸ. ನಿರೀಶ್ವರ ಸಾಂಖ್ಯದಲ್ಲಿ ಈಶ್ವರನಿಗೆ ಪ್ರವೇಶವಿಲ್ಲ. ಸೇಶ್ವರ ಸಾಂಖ್ಯದಲ್ಲಿ ಈಶ್ವರನೇ ಲಕ್ಷ್ಯ. ಇಲ್ಲಿ ಸಾಂಖ್ಯ ಎನ್ನುವುದೊಂದೇ ಸಮಾನ ಪದ. ಸಾಂಖ್ಯ ಎನ್ನುವುದಾದರೂ ಏನು?

ಸಾಂಖ್ಯ ಪದದ ವಿಶ್ಲೇಷಣೆಯಿಂದ ಈ ದರ್ಶನಗಳ ಅಧ್ಯಯನ ಆರಂಭಗೊಳ್ಳುತ್ತದೆ. ಸಾಂಖ್ಯ ಮತ್ತು ಯೋಗವನ್ನು ಈ ಹಿಂದೆ ಜ್ಞಾನಶಾಖೆಗಳೆಂದು ಗುರುತಿಸಲಾಗಿದೆ. ಸಂಖ್ಯೆಯಿಂದ ಕೂಡಿದ್ದು ಸಾಂಖ್ಯ. ಸಂಖ್ಯೆಗಳಿಂದ ಗುರುತಿಸಲ್ಪಟ್ಟ ತತ್ತ್ವಗಳ ಸಮೂಹವನ್ನೊಳಗೊಂಡ ಜ್ಞಾನವೇ ಸಾಂಖ್ಯ. ಸಂಖ್ಯೆಗಳಷ್ಟೆ ಖಚಿತ ಅಭಿಪ್ರಾಯವನ್ನು ಇವು ತಾತ್ತ್ವಿಕವಾಗಿ ಪ್ರತಿಬಿಂಬಿಸಿವೆ.

"ಶುದ್ಧಾತ್ಮ ತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ"-ಇದು ಸಾಂಖ್ಯಕ್ಕಿರುವ ಒಂದು ಸಮರ್ಪಕವಾದ ವ್ಯಾಖ್ಯೆ. ತತ್ತ್ವಗಳನ್ನು ಎಣಿಸಿ, ವಿಂಗಡಿಸಿ, ಅವುಗಳ ಸ್ವರೂಪವನ್ನು ಖಚಿತವಾಗಿ ನಿರ್ಣಯಿಸಿ ಹೇಳುವ ಶಾಸ್ತ್ರ (ವಿದ್ವಾನ್ ನಾಗೇಶಶಾಸ್ತ್ರಿ, ೨೦೦೯, ೧೯೪). ಮಹಾಭಾರತ ಕಾವ್ಯದಲ್ಲಿ ಎಂಟು, ಹನ್ನೊಂದು, ಹದಿನಾರು, ಹದಿನೇಳು, ಇಪ್ಪತ್ತು, ಇಪ್ಪತ್ತನಾಲ್ಕು, ಇಪ್ಪತ್ತೈದು, ಇಪ್ಪತ್ತಾರು ತತ್ತ್ವಗಳನ್ನು ಹೆಸರಿಸುವ ಜ್ಞಾನವು ಹಲವಾರು ದಾರ್ಶನಿಕರಿಂದ ಪ್ರತ್ಯೇಕವಾಗಿ ಮಂಡಿತವಾಗಿವೆ. ಸಂಖ್ಯಾ ವೈವಿಧ್ಯತೆಯಿಂದ ಕೂಡಿದ ಇವೆಲ್ಲವನ್ನೂ 'ಸಾಂಖ್ಯ'ದಡಿಯಲ್ಲಿ ವಿವರಿಸಲಾಗಿದೆ.

"ಪಂಚವಿಂಶತಿ ವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ"-ಇದು ಸಾಂಖ್ಯವನ್ನು ಕುರಿತ ಮಹಾಭಾರತ ಕಾವ್ಯದಲ್ಲಿರುವ ಭರತವಾಕ್ಯ (ರಂಗಸ್ವಾಮೀ, ೧೯೯೫, ೨೦೩/ ೩೨). ಸಾಂಖ್ಯದರ್ಶನದಡಿ ಪ್ರಮುಖವಾಗಿ ಗುರುತಿಸಲ್ಪಡುವುದು ಇಪ್ಪತ್ತೈದು ತತ್ತ್ವಗಳ

ಸಾಂಖ್ಯ. ಈ ವಾಕ್ಯ ಮೂಲಭಾರತದಲ್ಲಿಲ್ಲ; ಪ್ರಕ್ಷೇಪ ಎಂದು ವಿದ್ವಾಂಸರ ಅಭಿಮತ. ಆದರೂ ಬಾಧಕವಿಲ್ಲ.

ಸಾಂಖ್ಯ, ಯೋಗ, ಧ್ಯಾನಯೋಗ, ಸಾಂಖ್ಯಯೋಗ, ನಿರೀಶ್ವರ ಸಾಂಖ್ಯ, ಸೇಶ್ವರ ಸಾಂಖ್ಯ ಹೀಗೆ ಹಲವಾರು ಪದಪುಂಜಗಳು, ಪದಪ್ರಯೋಗಗಳು ಬಳಕೆಯಲ್ಲಿವೆ. ಈ ಪದಗಳು ಹಲವೆಡೆ ಅರ್ಥಖಚಿತತೆಗಿಂತ ಭಾವನಾತ್ಮಕವಾಗಿ ಬಳಕೆಗೊಂಡಿವೆ. ಇವನ್ನು ಬಿಡಿಬಿಡಿಯಾಗಿ ಖಚಿತವಾಗಿ ಅರ್ಥ ಮಾಡಿಕೊಳ್ಳಬೇಕು. ಭಗವದ್ಗೀತೆಯ ಪ್ರತಿ ಅಧ್ಯಾಯದ ಕೊನೆಯಲ್ಲಿ ವಿಷಯಸೂಚಕ ಪದದೊಡನೆ ಯೋಗಪದವೂ ಬಳಕೆಯಾಗಿದೆ! ಇದನ್ನು ಅರ್ಥೈಸುವುದು ಕಷ್ಟ. ಸಾಂಖ್ಯವು ಮೂಲತಃ ತಾತ್ತ್ವಿಕ ಜ್ಞಾನ; ಯೋಗವು ಅನುಷ್ಠಾನಾತ್ಮಕ ಅಥವಾ ಪ್ರಯೋಗಾತ್ಮಕ. ಸಾಂಖ್ಯವು ದ್ವೈತ ಸ್ವರೂಪವುಳ್ಳದ್ದಾದರೆ ಯೋಗವು ಅದ್ವೈತ ಪರ. ಸಾಂಖ್ಯವು ಪ್ರಕೃತಿ ಪುರುಷರನ್ನು ಪ್ರತ್ಯೇಕಿಸಿದರೆ, ಯೋಗವು ಆತ್ಮ, ಪರಮಾತ್ಮರನ್ನು ಒಗ್ಗೂಡಿಸುತ್ತದೆ. ಆಗಮ ಗ್ರಂಥಗಳ ಆರಂಭದಲ್ಲಿ ಸಾಂಖ್ಯ ದರ್ಶನವಿದೆ. ಆದ್ದರಿಂದ ಸಾಂಖ್ಯದ ಮೂಲವನ್ನೂ ಪ್ರಾಚೀನ ದಾರ್ಶನಿಕರ ಅಭಿಪ್ರಾಯವನ್ನೂ ಪರಂಪರೆಯನ್ನೂ ತಿಳಿದಿರುವುದು ಸೂಕ್ತ ಹಾಗೂ ಆವಶ್ಯಕ. ಈ ದಿಸೆಯಲ್ಲಿ ಹಲವು ವಿವರಗಳನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ಗುರುತಿಸಲಾಗಿದೆ. ಈ ವಿವರಗಳಿಗೆ ಮಹಾಭಾರತ ಕಾವ್ಯವೇ ಪ್ರಮುಖ ಆಕರಗ್ರಂಥ.

ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ
ಹಿರಣ್ಯಗರ್ಭೋ ಯೋಗಸ್ಯ ವೇತ್ತಾ ನಾನ್ಯಃ ಪುರಾತನಃ

ಕಪಿಲ ಮಹರ್ಷಿಯು ಸಾಂಖ್ಯದ ಆದ್ಯ ಪ್ರವರ್ತಕವೆಂದೂ, ಹಿರಣ್ಯಗರ್ಭನು ಯೋಗದ ಪ್ರಥಮ ವಕ್ತಾರನೆಂದೂ ಇಲ್ಲಿ ಪರಿಚಯಿಸಲಾಗಿದೆ (ರಂಗಸ್ವಾಮೀ, ೧೯೬೦, ೩೩೫೮/೨೬). ಕಪಿಲನ ಉಲ್ಲೇಖ ಶ್ವೇತಾಶ್ವತರ ಉಪನಿಷತ್ತಿನಲ್ಲಿದೆ ಎಂದು ವಿದ್ವಾಂಸರ ಹೇಳಿಕೆಯೂ ಇದೆ. (ಸ್ವಾಮಿ ಆದಿದೇವಾನಂದ, ೨೦೦೩, ೬೧-೬೨).

ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ
ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್

ಇಲ್ಲಿ ಉಕ್ತವಾಗಿರುವ ಕಪಿಲ ಪದ ಕೇವಲ ವಿಶೇಷಣ; ಕಪಿಲ ಎಂದಲ್ಲಿ ಕನಕ ಸದೃಶವಾದ ಕಪಿಲ ವರ್ಣವುಳ್ಳ ಹಿರಣ್ಯಗರ್ಭ, ಅರ್ಥಾತ್ ಬ್ರಹ್ಮ.

"ಕಪಿಲಂ ವಿಚಿತ್ರವರ್ಣಂ ಜ್ಞಾನಕ್ರಿಯಾ ಶಕ್ತ್ಯಾತ್ಮಕಂ ಹಿರಣ್ಯಗರ್ಭಮಿತ್ಯರ್ಥಃ"

–ಇದು ಶಂಕರಾನಂದನ ಟೀಕೆ (ಸ್ವಾಮಿ ಆದಿದೇವಾನಂದ, ೨೦೦೩, ೬೧-೬೨). ಮಹಾಭಾರತದ ಮತ್ತೊಂದು ಉಲ್ಲೇಖವೂ ಈ ಅಭಿಪ್ರಾಯವನ್ನು ಸಮರ್ಥಿಸಿದೆ. ಸಾಂಖ್ಯ, ಯೋಗಗಳ ಮೂಲವನ್ನು ಗುರುತಿಸುವುದರೊಂದಿಗೆ, ಪಾಶುಪತ, ಪಾಂಚರಾತ್ರಗಳನ್ನು ಶಿವಪ್ರಣೀತ, ನಾರಾಯಣ ಪ್ರಣೀತ ಎಂದು ಬಣ್ಣಿಸಲಾಗಿದೆ. ಈ ಪ್ರಕರಣದಲ್ಲಿ ಸಾಂಖ್ಯ, ಯೋಗ, ಪಾಶುಪತ, ಪಾಂಚರಾತ್ರಗಳು ದೈವಪ್ರಣೀತ ಎಂದು

ಹೇಳುವುದಷ್ಟೇ ಉದ್ದೇಶವಾಗಿದೆ. ಆದರೂ ಸಾಂಖ್ಯಕ್ಕೆ ಕಪಿಲನೇ ಆದ್ಯ ಪ್ರವರ್ತಕ ಎಂದು ಹಲವೆಡೆ ಪ್ರಸ್ತಾಪಗೊಂಡಿದೆ. ತತ್ತ್ವಗಳ ಎಣಿಕೆಯನ್ನು ಗುರುತಿಸಿದ ಕಪಿಲನ ಬಗ್ಗೆ ಭಾಗವತದಲ್ಲಿ ನೇರ ಉಲ್ಲೇಖವಿದೆ.

> ಕಪಿಲಸ್ತತ್ತ್ವ ಸಂಖ್ಯಾತಾ ಭಗವಾನಾತ್ಮಮಾಯಯಾ
> ಜಾತಃ ಸ್ವಯಮಜಃ ಸಾಕ್ಷಾದಾತ್ಮಪ್ರಜ್ಞಪ್ತಯೇ
>
> (ರಂಗಸ್ವಾಮೀ, ೨೦೦೦-೩೨೭/೨)

-ತತ್ತ್ವಗಳನ್ನು ಎಣಿಸುವ ನೇತರನಾಗಿ ಆತ್ಮಜ್ಞಾನವನ್ನು ಉಪದೇಶಿಸುವ ಸಲುವಾಗಿ ಕಪಿಲನೆಂಬ ಹೆಸರಿನಿಂದ ಭಗವಂತನೇ ಅವತರಿಸಿದ. ಹಲವು ಋಷಿಗಳಿಂದ ಪ್ರತಿಪಾದಿತವಾದ ಸಂಖ್ಯಾ ವಿವರಣೆಯನ್ನು ಇದರೊಂದಿಗೆ ಗಮನಿಸಬಹುದು. ಸಾಂಖ್ಯ ದರ್ಶನವು ಒಂದು ನಿಶ್ಚಿತ ರೂಪ ಪಡೆಯುವುದಕ್ಕೆ ಮುನ್ನ ಹಲವು ಮುನಿಶ್ರೇಷ್ಠರಿಂದ ಹಲವು ಸಂಖ್ಯೆಗಳಲ್ಲಿ ತತ್ತ್ವಗಳು ರೂಪಿಸಲ್ಪಟ್ಟವು. ಭಾಗವತ ಗ್ರಂಥದ ಉಲ್ಲೇಖದಂತೆ, ಒಂಬತ್ತು, ಹನ್ನೊಂದು, ಐದು, ಮೂರು, ಇಪ್ಪತ್ತಾರು, ಇಪ್ಪತ್ತೈದು, ಏಳು, ಒಂಬತ್ತು, ಆರು, ಹನ್ನೊಂದು, ಹದಿನಾರು, ಹದಿನೇಳು, ಹದಿಮೂರು ತತ್ತ್ವಗಳನ್ನೊಳಗೊಂಡಂತೆ ವಿವರಗಳಿವೆ. (ಶ್ರೀಹರಿ, ೨೦೦೬, ೩೩೧೭/೯). ಈ ರೀತಿ ಸಾಂಖ್ಯದ ಬೆಳೆವಣಿಗೆಗೆ ಹಲವು ಋಷಿಮುನಿಗಳು ಕಾರಣರಾಗಿದ್ದಾರೆ. ಈ ಋಷಿಮುನಿಗಳ ಉಲ್ಲೇಖ ಮಹಾಭಾರತ ಕಾವ್ಯದಲ್ಲಿದೆ. ಇವರುಗಳನ್ನು ಗುರುತಿಸಿರುವ ಯಾದಿ ಕಾಲಾನುಕ್ರಮದಲ್ಲಿಲ್ಲ. ಈ ಋಷಿಗಳಲ್ಲಿ ಕಪಿಲನಿದ್ದಾನೆ. ಅವನ ಶಿಷ್ಯರಿದ್ದಾರೆ. ಅದರೊಂದಿಗೆ ಇನ್ನಿತರ ಮಾಹಿತಿಯೂ ಲಭ್ಯ. ಮಹಾಭಾರತ ಕಾವ್ಯದಲ್ಲಿರುವ ಈ ಪಟ್ಟಿ ಈ ರೀತಿ ಇದೆ.

ಜೈಗಿಷವ್ಯ, ಅಸಿತ, ದೇವಲ, (ಅಸಿತ ದೇವಲ) ಪರಾಶರ, ವಾರ್ಷಗಣ್ಯ, ಭೃಗು, ಪಂಚಶಿಖ, ಕಪಿಲ, ಶುಕ, ಗೌತಮ, ಅರ್ಷ್ಟಿಷೇಣ, ಗರ್ಗ, ನಾರದ, ಆಸುರಿ, ಪೌಲಸ್ತ್ಯ, ಸನತ್ಕುಮಾರ, ಶುಕ್ರ, ಕಶ್ಯಪ-ಎಂದು ಹದಿನೆಂಟು ಮಂದಿ ಪೂರ್ವ ಸೂರಿಗಳು ಹೆಸರಿಸಲ್ಪಟ್ಟಿದ್ದಾರೆ (ರಂಗಸ್ವಾಮೀ, ೧೯೮೨, ೨೯೨೧/೨೫).

ಇವರುಗಳಲ್ಲದೆ ಮಹಾಭಾರತದಲ್ಲೇ ಉಲ್ಲೇಖಿತವಾದ ಜನಕ ಮಹಾರಾಜನನ್ನೂ ಈ ವಿದ್ವನ್ಮಣಿಗಳ ವೃಂದದೊಡನೆ ಸೇರಿಸಬಹುದು. ಈ ಕಾವ್ಯದಲ್ಲಿ ಕಪಿಲನೊಂದಿಗೆ ಸ್ಯೂಮರಶ್ಮಿಯ ಸಂವಾದವಿದೆ. ಕಪಿಲ ವೈದಿಕ ಚಿಂತನೆಯನ್ನೂ ಬಿಡದೆ, ಯಜ್ಞ ಯಾಗಾದಿಗಳನ್ನು ಹೊರತುಪಡಿಸಿ, ಮೋಕ್ಷಕ್ಕೆಂದು ಸಾಧ್ಯತೆಯ ಹಾದಿಯನ್ನು ಕಲ್ಪಿಸಿದ. ಅವನದು ಪ್ರತಿಭಟನೆಯ ಹಾದಿಯೇ. ಶಾಂತಚಿತ್ತನಾಗಿ, ಸಾವಧಾನವಾಗಿ ಅಡಿ ಇಡುತ್ತಾ, ತನ್ನ ಅಭಿಪ್ರಾಯಗಳನ್ನು ಮಂಡಿಸಿದ. ಈ ವಿವರಗಳನ್ನು ಅವನ ಸಂವಾದದಲ್ಲಿ ಕಾಣಬಹುದು. ಪಂಚಶಿಖನೊಂದಿಗೆ ಜನಕ ಮಹಾರಾಜನ ಸಂವಾದವಿದೆ. ಇಲ್ಲಿ ಸಂಖ್ಯೆಗಳ ಸಾಂಖ್ಯ ತತ್ತ್ವಗಳ ಅರಿವು ಪ್ರಥಮ ಬಾರಿಗೆ ಆಗುತ್ತದೆ.

ಜೈಗಿಷವ್ಯನಿಂದ ಅಸಿತ ದೇವಲನಿಗೆ, ನಾರದನಿಂದ ಶುಕನಿಗೆ, ಸನತ್ಕುಮಾರನಿಂದ ವೃತ್ರನಿಗೆ ಉಪದೇಶವಿದೆ. ಈ ವಿವರಗಳನ್ನು ಗಮನಿಸಬೇಕು. ಕಪಿಲ, ಆಸುರಿ, ಪಂಚಶಿಖ,

ಜನಕ, ಸನತ್ಕುಮಾರ, ಶುಕ್ರ ಇವರುಗಳು ಪರಂಪರೆಯಲ್ಲಿ ಪ್ರಾಚೀನರು. ಯೋಗಭಾಷ್ಯದಲ್ಲಿ ವಾರ್ಷಗಣ್ಯನೆಂಬ ಪ್ರಾಚೀನ ಯೋಗಶಾಸ್ತ್ರವಿದನ ಹೆಸರಿದೆ. ಸನತ್ಕುಮಾರನೂ ಯೋಗಶಾಸ್ತ್ರದ ಕರ್ತೃ ಎಂದೇ ಗುರುತಿಸಲ್ಪಟ್ಟಿದ್ದಾನೆ. ಯೋಗದರ್ಶನದಲ್ಲಿ ಇವರ ಕಾಣ್ಕೆಯನ್ನು ಗುರುತಿಸಲು ಸಾಧ್ಯವಾಗಬಹುದು. ಮೇಲೆ ಕಾಣಿಸಿದ ಸಂವಾದ, ಉಪದೇಶಗಳಲ್ಲಿ ಅವರುಗಳು ಪ್ರತಿಪಾದಿಸಿದ ಅಂಶಗಳು ಕೆಲವೊಮ್ಮೆ ಅಸ್ಪಷ್ಟ. ಆದರೆ ಸಾಂಖ್ಯದ ನೇತಾರರೆಂದು ಗುರುತಿಸಲು ಸಾಧ್ಯವಾಗಿದೆ. ಇವರಲ್ಲಿ ಅತ್ಯಂತ ಪ್ರಮುಖನಾದವನು ಕಪಿಲ.

ಕಪಿಲ ಮತ್ತು ಸ್ಯೂಮರಶ್ಮಿಯ ಸಂವಾದ ಶಾಂತಿಪರ್ವದ ಮೋಕ್ಷಧರ್ಮ ಪರ್ವದಲ್ಲಿದೆ. ಇದನ್ನು ಮೊದಲು ಗಮನಿಸಬಹುದು. ಇಲ್ಲಿ ವೈದಿಕ ಸಮಾಜದ ಪರಿಚಯವಾಗುತ್ತದೆ. ಯಜ್ಞಯಾಗಾದಿಗಳಿಂದ ವಿಜೃಂಭಿಸುತ್ತಿದ್ದ ಕಾಲ. ವರ್ಣಾಶ್ರಮ ಧರ್ಮವೂ ಮುಂಚೂಣಿಯಲ್ಲಿತ್ತು. ಕಪಿಲನಿಗೆ ವೇದಗಳಲ್ಲಿ ವಿಶ್ವಾಸವಿತ್ತು. ಆದರೆ ಯಜ್ಞ ಕರ್ಮಗಳ ಆಚರಣೆಯ ಕೆಲವು ಅಂಶಗಳು ಅವನಿಗೆ ಜಿಗುಪ್ಸೆಯನ್ನುಂಟು ಮಾಡುತ್ತಿತ್ತು. ಯಜ್ಞಯಾಗಾದಿಗಳಲ್ಲಿ ನಡೆಯುತ್ತಿದ್ದ ಹಿಂಸೆಯನ್ನು ವಿರೋಧಿಸಿದ. ವರ್ಣಾಶ್ರಮಿಗಳು ಉಪನಿಷತ್ ಧರ್ಮವನ್ನು ಅನುಸರಿಸಲು ಇವನು ಸೂಚಿಸಿದ. ಇದು ಎಲ್ಲರಿಗೂ ಸಾಧ್ಯ ಎಂಬ ಅಭಿಪ್ರಾಯವನ್ನು ಮಂಡಿಸಿದ. ಕಪಿಲ ಮತ್ತು ಸ್ಯೂಮರಶ್ಮಿಯ ಸಂವಾದದಲ್ಲಿ ಸಾಂಖ್ಯಕ್ಕೆ ಸಂಬಂಧಿಸಿದ ವಿವರಗಳನ್ನು ಕಾಣಲಾಗದು. ಸಾಂಖ್ಯಾದಿ ದರ್ಶನಗಳ ಉಗಮಕ್ಕೆ ಕಾರಣವಾದ ಅಂಶಗಳನ್ನು ಗಮನಿಸಬಹುದು. ಯಜ್ಞಯಾಗಾದಿಗಳಲ್ಲಿ ಹಿಂಸೆಯನ್ನು ವಿರೋಧಿಸಿದ್ದು ಮೊದಲ ಹಂತ. ಉಪನಿಷತ್ ಧರ್ಮವನ್ನು ಬೋಧಿಸಿದ್ದು ಎರಡನೆಯ ಹಂತ. ಉಪನಿಷತ್ತುಗಳ ಸಂಕಲನವೂ ವೈದಿಕ ಕರ್ಮಕಾಂಡವನ್ನು ವಿರೋಧಿಸಿ ಮೂಡಿದ ಪ್ರಯತ್ನವೆಂದೇ ಗಮನಿಸಬೇಕು. ಉಪನಿಷತ್ತುಗಳು ವೇದದ ಭಾಗವೇ ಆಗಿದ್ದರೂ ನಿಗಮ ಮತ್ತು ಆಗಮ ಸಾಹಿತ್ಯಕ್ಕೆ ನಡುವಣ ಕೊಂಡಿಯಂತೆ ಇದೆ. ಯೋಗದ ಆಚರಣೆಯ ಮೊದಲ ಪ್ರಯೋಗವನ್ನು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಯೋಗಕ್ಕೆ ಸಂಬಂಧಿಸಿದಂತೆ ತಾತ್ತ್ವಿಕ ಅಂಶಗಳು ಸಾಂಖ್ಯದ ಮೂಲಕ ಒಂದು ಚೌಕಟ್ಟಿನಲ್ಲಿ ಲಭಿಸಿತು. ತಾತ್ತ್ವಿಕ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ, ಮೊದಲ ಹಂತದ್ದು ನಿರೀಶ್ವರ ಸಾಂಖ್ಯ; ತದನಂತರ ಸೇಶ್ವರ ಸಾಂಖ್ಯ. ಕಪಿಲ, ಸ್ಯೂಮರಶ್ಮಿಯ ಸಂವಾದವೂ ಸುದೀರ್ಘವಾದುದು. ಈ ಸಂವಾದದ ಕೆಲವು ತುಣುಕುಗಳನ್ನು ಇಲ್ಲಿ ಗಮನಿಸಬಹುದು (ರಂಗಸ್ವಾಮೀ, ೧೯೮೨, ೨೫೪/೨೫).

ಹಂ ಹೋ ವೇದಾಯದಿ ಮತಾಧರ್ಮಃ ಕೇನಾ ಪರೇ ಮತಾಃ

ವೇದಗಳ ಪ್ರಾಮಾಣ್ಯದಲ್ಲಿ ಸಂದೇಹವಿರುವುದಾದರೆ, ಇತರೆ ಯಾವ ಧರ್ಮ ಶಾಸ್ತ್ರಗಳ ಆಧಾರದಿಂದ ಪ್ರಮಾಣೀಕರಿಸಲು ಸಾಧ್ಯ?

ನಾಹಂ ವೇದಾನ್ ವಿನಿಂದಾಮಿ ನ ವಿವಕ್ಷಾಮಿ ಕರ್ಹಿಚಿತ್<br>
ಪೃಥಗಾಶ್ರಮೀಣಾಂ ಕರ್ಮಾಣ್ಯೇಕಾರ್ಥಾನೀತಿ ನಃ ಶ್ರುತಂ

ನಾನು ವೇದಗಳ ನಿಂದನೆ ಮಾಡುವವನಲ್ಲ ; ವೇದ ವಿರುದ್ಧವಾದ ಮಾತುಗಳನ್ನೂ ಹೇಳುವುದಿಲ್ಲ. ಎಲ್ಲಾ ಆಶ್ರಮಧರ್ಮದವರಿಗೂ ಯಾವ ಕರ್ಮಗಳುಂಟೋ ಅವುಗಳಿಗೆ ಒಂದೇ ರೀತಿಯ ಫಲವಿರುವುದು.

ಅನಾಲಂಭೇ ಹ್ಯದೋಷಃ ಸ್ಯಾದಾಲಂಭೇ ದೋಷ ಉತ್ತಮಃ
ಏವಂ ಸ್ಥಿತಸ್ಯ ಶಾಸ್ತ್ರಸ್ಯ ದುರ್ವಿಜ್ಞೇಯಂ ಬಲಾಬಲಂ

ಯಜ್ಞಗಳಲ್ಲಿ ಪಶುಬಲಿಯಾಗಿದ್ದರೆ ದೋಷವಿಲ್ಲ ; ಪಶುಬಲಿಯಾದರೆ ಮಹಾದೋಷವು ಉಂಟಾಗಬಹುದು. ಈ ಸ್ಥಿತಿಯ ಬಲಾಬಲಗಳನ್ನು ಅಂದರೆ ಪರಿಣಾಮವನ್ನು ತಿಳಿಯುವುದು ಅತ್ಯಂತ ಕ್ಲಿಷ್ಟಕರ (ಅದೇ, ಪು. ೨೩೯೬).

ಯದ್ಯತ್ರ ಕಿಂಚಿದ್ ಪ್ರತ್ಯಕ್ಷಮಹಿಂಸಾಯಾಃ ಪರಂ ಮತಂ
ಋತ್ವೇತ್ವಾಗಮಶಾಸ್ತ್ರೇಭ್ಯೋ ಬ್ರೂಹಿ ತದ್ಯದಿ ಪಶ್ಯಸಿ

ಅಹಿಂಸೆಯೇ ಶ್ರೇಷ್ಠ ಧರ್ಮ. ಇದಕ್ಕಿಂತ ಶ್ರೇಷ್ಠವಾದ ಧರ್ಮವಿದ್ದರೆ, ಅದನ್ನು ಪ್ರತಿಪಾದಿಸುವ ಆಗಮಶಾಸ್ತ್ರಗಳಿದ್ದರೆ ತಿಳಿಸು (ಅದೇ, ಪು. ೨೩೯೭).

ಆಗಮೋ ವೇದವಾದಾಸ್ತು ತರ್ಕಶಾಸ್ತ್ರಾಣಿ ಆಗಮಃ

ಆಗಮಗಳೂ ವೇದಪರವಾದವು. ತಾರ್ಕಿಕವಾದ ಶಾಸ್ತ್ರಗಳೂ ಆಗಮಗಳೇ ಆಗಿವೆ (ಅದೇ, ಪು. ೨೪೧೭).

ವೇದಾಃ ಪ್ರಮಾಣಂ ಲೋಕಾನಾಂ ನ ವೇದಾಃ ಪೃಷ್ಠತಃ ಕೃತಾಃ
ದ್ವೇಬ್ರಹ್ಮಣಿ ವೇದಿತವ್ಯೇ ಶಬ್ದಬ್ರಹ್ಮಪರಂ ಚ ಯತ್

ಈ ಲೋಕದಲ್ಲಿ ವೇದಗಳೇ ಪ್ರಮಾಣಗಳು. ವೇದಗಳು ಎಂದೂ ನಿರ್ಲಕ್ಷ್ಯಕ್ಕೆ ಒಳಗಾಗಿಲ್ಲ. ಬ್ರಹ್ಮದ ಎರಡು ರೂಪಗಳನ್ನು ತಿಳಿದುಕೊಳ್ಳಬೇಕು; ಒಂದು ಶಬ್ದಬ್ರಹ್ಮ, ಮತ್ತೊಂದು ಪರಬ್ರಹ್ಮ ಅಥವಾ ಪರಮಾತ್ಮ (ಅದೇ, ಪು. ೨೪೨೫).

ಕಾಲಾನಂತರದಲ್ಲಿ ವೈದಿಕಾಚರಣೆಯಿಂದ ಪರಬ್ರಹ್ಮನೇ ಲಕ್ಷ್ಯವೆಂದೂ, ಆಗಮಗಳ ಆಚರಣೆಯಿಂದ ಪರಮಾತ್ಮನೇ ಲಕ್ಷ್ಯ ಎಂದು ವ್ಯವಹರಿಸಲಾಯಿತು.

ಕಪಿಲನ ಸಂವಾದದಲ್ಲಿ ಸಾಂಖ್ಯದ ಅಂಶಗಳನ್ನು ಕಾಣಲಾಗದು. ಆದರೆ ಸಾಂಖ್ಯ ಆಗಮಗಳ ಬೆಳವಣಿಗೆಯಲ್ಲಿ ಕಪಿಲನ ಕಾಣ್ಕೆ ಇದೆ ಎಂದು ಪರೋಕ್ಷವಾಗಿ ಹೇಳಬಹುದು. ಹಿಂಸೆಯನ್ನು ವಿರೋಧಿಸಿದ ಕಪಿಲ ಆಗಮಗಳ ಪರೋಕ್ಷ ಬೆಳವಣಿಗೆಗೆ ಕಾರಣನಾದ.

ಸಾಂಖ್ಯದ ಪ್ರಥಮ ವಕ್ತಾರ ಕಪಿಲ ಎಂಬ ಹೇಳಿಕೆ ಹಲವೆಡೆ ವ್ಯಕ್ತವಾಗಿದೆ. ಆದರೆ ಈವರೆಗೆ ಅವನನ್ನು ಗುರುತಿಸಲು ಸಾಧ್ಯವಾಗಿರಲಿಲ್ಲ. ಸ್ಯೂಮರಶ್ಮಿಯೊಡನೆ ನಡೆಸಿದ ಸಂವಾದ, ಇವನನ್ನು ಗುರುತಿಸುವಲ್ಲಿ ಪೂರಕವಾಗಿದೆ. ದರ್ಶನಗಳು ಒಮ್ಮಿಂದೊಮ್ಮೆ ದಿಢೀರನೆ ಉದ್ಭವಿಸುವುದಿಲ್ಲ ಎಂದು ಗಮನಿಸಬೇಕು. ಹಲವು ಹಂತಗಳಲ್ಲಿ ಬೆಳೆದು ಹರಳುಗಟ್ಟುತ್ತವೆ.

ಅಮೂರ್ತೇಸ್ತಸ್ಯ ಕೌಂತೇಯ ಸಾಂಖ್ಯಂ ಮೂರ್ತಿರಿತಿ ಶ್ರುತಿಃ
ಅವಿಜ್ಞಾನಾನಿ ತಸ್ಯಾಹುರ್ಮತಂ ಹಿ ಭರತರ್ಷಭ

ನಿರಾಕಾರನಾದ ಪರಮಾತ್ಮನಿಗೆ ಸಾಂಖ್ಯವೇ ಮೂರ್ತಿ ಸ್ವರೂಪ; ಇದು ಅಲಂಕಾರೋಕ್ತಿಯೇ ಹೊರತು ಸಾಕಾರಮೂರ್ತಿಗೆ ಸಂಬಂಧವಿಲ್ಲ. ಇದು ಸಾಂಖ್ಯಕ್ಕಿರುವ ಮಹತ್ತ್ವವನ್ನು ಉಲ್ಲೇಖಿಸಿದೆ (ಅದೇ, ಪು. ೨೭೭೮).

ಕಪಿಲನಷ್ಟೇ ಪ್ರತಿಭಾವಂತನಾದ ಪಂಚಶಿಖನನ್ನು ಕುರಿತ ಕೆಲವು ಮಾಹತಿಗಳೂ ಮಹಾಭಾರತದಲ್ಲಿ ಲಭ್ಯ ಈತ ಆಸುರಿಯ ಪ್ರಥಮ ಶಿಷ್ಯ. ಪಾಂಚರಾತ್ರದಲ್ಲಿ ಈತ ನಿಷ್ಣಾತ. ಪಾಂಚರಾತ್ರವನ್ನು ತಿಳಿದ ಅತಿಪ್ರಾಚೀನ ವಿದ್ವಾಂಸ ಎಂದು ಇವನು ಪರಿಗಣಿಸಲ್ಪಡುತ್ತಾನೆ. ಪಂಚಶಿಖ ತನ್ನ ತಾಯಿಯಲ್ಲದ ಕಪಿಲಾ ಎಂಬ ಮತ್ತೊಬ್ಬ ಸ್ತ್ರೀಯ ಸ್ತನ್ಯದಿಂದ ಬೆಳೆದವನು. ಆದ್ದರಿಂದ ಕಾಪಿಲೇಯ ಎಂದೂ ಇವನಿಗೆ ಮತ್ತೊಂದು ಹೆಸರು. ಕಪಿಲನ ಪರಂಪರೆಯವನೆಂದೂ ಗುರುತಿಸಬಹುದು. ಇವನ ಉಪದೇಶಗಳಲ್ಲಿ ಸಾಂಖ್ಯದ  ತಾತ್ತ್ವಿಕ ಚಿಂತನೆ ಇದೆ. (ರಂಗಸ್ವಾಮೀ, ೧೯೮೨, ೧೯೫೫/೨೪).

ಪ್ರತಿಯೊಂದು ಜೀವಿಯೂ ಆಕಾಶ, ವಾಯು, ತೇಜಸ್ಸು, ಜಲ, ಪೃಥ್ವೀ ಎಂಬ ಪಂಚಧಾತುಗಳಿಂದ ಕೂಡಿದೆ.  ಇವು ಸ್ವಭಾವತಃ ಒಟ್ಟಿಗೆ ಇರುತ್ತವೆ. ಹಾಗೆಯೇ ವಿಭಜನೆಗೊಳ್ಳುತ್ತವೆ. ಈ ಪಂಚತತ್ತ್ವಗಳ ಸಂಕಲನವೇ ಅನೇಕ ವಿಧವಾದ ಶರೀರಗಳ ಸೃಷ್ಟಿ, ಸಂಯೋಜನೆಗೆ ಕಾರಣ. (ಅದೇ, ಪು. ೧೯೭೮). ಇಂದ್ರಿಯಗಳಿಂದ ಇಂದ್ರಿಯ ವಿಷಯಗಳು, ಸತ್ತ್ವ, ರಜಸ್, ತಮೋಗುಣವೆಂಬ ಮೂರು ಸ್ವಭಾವಗಳು, ಚೈತನ್ಯ, ಮನಸ್ಸು, ಪ್ರಾಣಾಪಾನಾದಿಗಳು, ಧಾತುಗಳು ಈ ಶರೀರದಲ್ಲಿ ಪ್ರಕಟಗೊಳ್ಳುತ್ತವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ ರೂಪಾಶ್ರಯಾದಿ ಷಡ್ಗುಣಗಳು ನಿರಂತರ ಜ್ಞಾನಕ್ಕೆ ಕಾರಣವಾಗುತ್ತವೆ. ಇಂದ್ರಿಯಾರ್ಥಗಳ ಅರಿವು ಉಂಟಾದಾಗ ಕರ್ಮವು ತ್ಯಜಿಸಲ್ಪಡುತ್ತದೆ. ಎಲ್ಲಾ ತತ್ತ್ವಗಳ ಅರಿವುಂಟಾದಾಗ ಮೋಕ್ಷಕ್ಷೆ ದಾರಿಯಾಗುತ್ತದೆ. ಆಗ ಶ್ರೇಷ್ಠವಾದ ಬುದ್ಧಿ, ಅವ್ಯಯ, ಮಹತ್ತು ಎಂದು ಗುರುತಿಸಲಾಗುತ್ತದೆ.

ಪಂಚಶಿಖನು ಆಚರಣೆಯಲ್ಲಿ ಮೋಕ್ಷದಾಯಕವಾದ ತ್ಯಾಗಜೀವನವನ್ನು ಉಪದೇಶಿಸಿದ. ಇದನ್ನು 'ಸಮ್ಯಗ್ವಧ' ಎಂದು ಹೆಸರಿಸಲಾಗಿದೆ.

ಅತ್ರ ಸಮ್ಯಗ್ವಧೋನಾಮ ತ್ಯಾಗಶಾಸ್ತ್ರಮನುತ್ತಮಂ
ಶೃಣುಯತ್ತವ ಮೋಕ್ಷಾಯ ಭಾಷ್ಯಮಾಣಂ ಭವಿಷ್ಯತಿ
ದ್ರವ್ಯತ್ಯಾಗೇತು ಕರ್ಮಾಣಿ ಭೋಗತ್ಯಾಗೇ ವ್ರತಾನ್ಯಪಿ
ಸುಖತ್ಯಾಗೇ ತಪೋ ಯೋಗಂ ಸರ್ವತ್ಯಾಗೇ ಸಮಾಪನಾ

ಕಪಿಲ ಉಪನಿಷದ್ಧರ್ಮವನ್ನು ಬೋಧಿಸಿದ. ಅದರಂತೆಯೇ ಪಂಚಶಿಖನು ತ್ಯಾಗಧರ್ಮವನ್ನು ಉಪದೇಶಿಸಿದ. ಸಾಂಖ್ಯರು ತಾತ್ತ್ವಿಕ ನೀತಿಯೊಂದನ್ನು ಸಿದ್ಧಪಡಿಸಿ, ಲೋಕದ ವ್ಯವಹಾರಕ್ಕಾಗಿ ಮತ್ತೊಂದು ವ್ಯವಸ್ಥೆಯನ್ನು ಸೂಚಿಸಿದ್ದಾರೆ. ಯಜ್ಞಕರ್ಮಗಳ

ಆಚರಣೆಯ ಮೂಲಕ ದ್ರವ್ಯ ತ್ಯಾಗ, ವ್ರತಾಚರಣೆಗಳ ಮೂಲಕ ಭೋಗತ್ಯಾಗ, ತಪಸ್ಸು, ಯೋಗಗಳ ಮೂಲಕ ಸುಖತ್ಯಾಗ, ಸರ್ವತ್ಯಾಗಗಳಿಂದ ಮುಕ್ತಿ; ಇದು ಪಂಚಶಿಖನ ತ್ಯಾಗಧರ್ಮದ ವಿವರಣೆ ಎನಿಸಿದೆ. ಸಾಂಖ್ಯರು ನಿರ್ದೇಶಿಸಿದ ಆಚರಣೆಗಳು ನಿಧಾನವಾಗಿ ಯಜ್ಞಯಾಗಾದಿಗಳಿಂದ ದೂರವಾಗುತ್ತಿದೆ ಎಂದು ಗಮನಿಸಬಹುದು. ಇವು ಧ್ಯಾನ, ಯೋಗಗಳಿಗೆ ಪ್ರಾಶಸ್ತ್ಯ ನೀಡಿವೆ. ಈ ಆಚರಣೆಗಳನ್ನು ಎಲ್ಲರೂ ಕೈಗೊಳ್ಳಬಹುದಾಗಿದ್ದು, ಯಜ್ಞಯಾಗಾದಿಗಳನ್ನು ಕೆಲವು ವರ್ಣಾಶ್ರಮಿಗಳು ಮಾತ್ರ ಕೈಗೊಳ್ಳುತ್ತಿದ್ದರು ಎಂದೂ ಗಮನಿಸಬಹುದು.

ಪಂಚಶಿಖನು ಉಪದೇಶಿಸಿದ ಸಾಂಖ್ಯದ ತಾತ್ತ್ವಿಕ ಸ್ವರೂಪವು ಹನ್ನೆರಡು ತತ್ತ್ವಗಳಿಂದ ಕೂಡಿದೆ.

ಸ್ವಕರ್ಮ ಯುಗ ಸದ್ಭಾವೋ ದಶಸ್ವೇತೇಷು ತಿಷ್ಠತಿ
ಚಿತ್ತಮೇಕದಾಶಂ ವಿದ್ಧಿ ಬುದ್ಧಿ ದ್ವಾದಯೀ ಭವೇತ್

ಹತ್ತು ಇಂದ್ರಿಯಗಳೂ ತಮಗೆ ಸಂಬಂಧಿಸಿದ ವಿಷಯಗಳನ್ನು ಒಂದೇ ಬಾರಿ ಗ್ರಹಿಸುತ್ತವೆ. ಹತ್ತು ಇಂದ್ರಿಯಗಳ ನಂತರ ಹನ್ನೊಂದನೆಯದು ಚಿತ್ತ, ಹನ್ನೆರಡನೆಯದು ಬುದ್ಧಿ.

ಸೂಕ್ಷ್ಮವಾದ ಇಂದ್ರಿಯಗಳೊಡನೆ ವಿಷಯಸಂಗದಲ್ಲಿ ಆಸಕ್ತಿ ಇರುವ ಮೂರು ಗುಣಗಳಿಂದ ಕೂಡಿದ ಶರೀರವಿದೆ. ಈ ಶರೀರದಲ್ಲಿ ಪುರುಷನಿದ್ದಾನೆ. ಶರೀರ ಮತ್ತು ಇಂದ್ರಿಯಗಳ ಸಂಘಾತವನ್ನು ಅಧ್ಯಾತ್ಮ ಚಿಂತನೆಯುಳ್ಳವರು ಕ್ಷೇತ್ರವೆಂದು ಗುರುತಿಸುತ್ತಾರೆ. ಮನಸ್ಸಿನ ಭಾವವೇ ಕ್ಷೇತ್ರಜ್ಞ ಎನ್ನುತ್ತಾರೆ. ನದಿಗಳು ಸಮುದ್ರವನ್ನು ಸೇರಿ ತನ್ನತನವನ್ನು ಕಳೆದುಕೊಳ್ಳುವಂತೆ ಜೀವಗಳೂ ಅಂತಿಮವಾಗಿ ತಮ್ಮತನವನ್ನು ಕಳಚಿ ಮೂಲದಲ್ಲಿ ಸಮಾವೇಶಗೊಳ್ಳುತ್ತವೆ.

ಯಥಾರ್ಣವಗತಾನದ್ಯೋ ವ್ಯಕ್ತಿರ್ಜಹತಿ ನಾಮ ಚ
ನದಾಶ್ಚತಾನಿಯಚ್ಛಂತಿ ತಾ ದೃಶಃ ಸತ್ತ್ವ ಸಂಕ್ಷಯಃ

ಭಗವದ್ಗೀತೆಯಲ್ಲಿ ಕಾಣುವ 'ಪದ್ಮಪತ್ರಮಿವಾಂಭಸಾ' ಉಕ್ತಿಯೂ ಸಾಂಖ್ಯ ಮೂಲದ್ದು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಅಧಿಕಾರವಾಣಿಯನ್ನು ಗಮನಿಸಬೇಕು. ಮೋಕ್ಷವಿದ್ಯೆಯನ್ನು ತಿಳಿದಿರುವವನು, ಆತ್ಮತತ್ತ್ವವನ್ನು ತಿಳಿದಿರುವವನು ಕರ್ಮಫಲಗಳನ್ನು ಅಂಟಿಸಿಕೊಳ್ಳಲಾರ. ಜೀವನದಲ್ಲಿ ಇದ್ದೂ ಇಲ್ಲದಂತೆ, ತಾವರೆಯ ಎಲೆಯ ಮೇಲಿನ ನೀರ ಹನಿಯಂತೆ, ಅಂಟಿಸಿಕೊಳ್ಳದಂತೆ ಬಾಳುತ್ತಾನೆ. ಸರ್ಪವು ತನ್ನ ಪರೆಯನ್ನು ಕಳಚಿ ಹಿಂತಿರುಗಿ ನೋಡದಂತೆ, ಪುರುಷನು ಸಂಸಾರ ಬಂಧನದಿಂದ ಮುಕ್ತನಾಗಿ ದುಃಖವನ್ನು ತೊರೆದು ಹೊರಡುತ್ತಾನೆ. ಇಲ್ಲಿ ನಿರೀಶ್ವರ ಸಾಂಖ್ಯ ಇಣುಕಿದೆ ಎಂದು ಗಮನಿಸಬಹುದು. (ಅದೇ, ಪು. ೧೯೮೭-೮೮).

ಇಮಾಂ ಚ ಯೋ ವೇದ ವಿಮೋಕ್ಷಬುದ್ಧಿಂ
ಆತ್ಮನಮನ್ವಿಚ್ಛತಿ ಚಾ ಪ್ರಮತ್ತಃ
ನ ಲಿಪ್ಯತೇ ಕರ್ಮ ಫಲೈರನಿಷ್ಟೈಃ
ಪತ್ರಂ ಬಿಸಸ್ಯೇವ ಜಲೇನಸಿಕ್ತಂ

ಜನಕ ಮಹಾರಾಜನು ತನ್ನ ಪೂರ್ವವೃತ್ತಾಂತವನ್ನು ತಿಳಿಸುತ್ತಾ ತನ್ನ ಗುರುವಾದ ಪಂಚಶಿಖನು ಪರಾಶರ ಗೋತ್ರದವನು ಎನ್ನುತ್ತಾನೆ. ಪರಾಶರನನ್ನು ಸಾಂಖ್ಯದ ವಕ್ತಾರನೆಂದೇ ಗುರುತಿಸಲಾಗಿದೆ. ಜನಕನೂ ಸಾಂಖ್ಯ, ಯೋಗ ಮತ್ತು ರಾಜಧರ್ಮಗಳಲ್ಲಿ ಪರಿಣತಿ ಹೊಂದಿದವನು. ಕ್ಷತ್ರಿಯ ಧರ್ಮಾನುಸಾರ ರಾಜ್ಯವನ್ನು ಪಾಲಿಸುತ್ತಿದ್ದ (ರಂಗಸ್ವಾಮೀ, ೧೯೯೦, ೨೯೪೪/೨೬).

ಸಾಂಖ್ಯದ ಪ್ರತಿಪಾದನೆಯಲ್ಲಿ ಸಂಖ್ಯೆಗಳ ಪಾತ್ರ ಗಮನೀಯವಾದುದು ಎಂದು ಈ ಹಿಂದೆ ಗುರುತಿಸಲಾಗಿದೆ. ಮೋಕ್ಷಧರ್ಮ ಪರ್ವದಲ್ಲಿ ಅಸಿತ ದೇವಲ ಮತ್ತು ನಾರದರ ಸಂವಾದದಲ್ಲಿ ಎಂಟು, ನಂತರ ಹದಿನೆಂಟು ತತ್ತ್ವಗಳ ಉಲ್ಲೇಖವಿದೆ (ರಂಗಸ್ವಾಮೀ, ೧೯೮೨, ೨೪೬೩–೬೪).

ಪಂಚಭೂತಗಳು ಮತ್ತು ಕಾಲ; ಇವು ಶಾಶ್ವತವಾದ ಆರು ತತ್ತ್ವಗಳು. ಇವುಗಳೊಂದಿಗೆ ವಿಶುದ್ಧಭಾವ ಮತ್ತು ಅಭಾವವೂ ಸೇರಿ ಎಂಟು ತತ್ತ್ವಗಳು ಎಂದು ಗುರುತಿಸಲ್ಪಟ್ಟಿವೆ. ಇವುಗಳಲ್ಲಿ ಮೊದಲ ಆರನ್ನು ನಿತ್ಯ, ಶಾಶ್ವತ ಎಂದಿದ್ದಾರೆ. ಎಂಟು ತತ್ತ್ವಗಳೂ ಸೇರಿ ಜಗತ್ತಿನ ಉತ್ಪತ್ತಿಗೆ ಹಾಗೂ ವಿನಾಶಕ್ಕೆ ಕಾರಣವಾಗುತ್ತವೆ ಎಂದು ಗುರುತಿಸಲಾಗಿದೆ.

ವಿದ್ಧಿನಾರದ ಪಂಚೈತಾನ್ ಶಾಶ್ವತಾನಚಲಾನ್ ಧ್ರುವಾನ್
ಮಹತಸ್ತೇಜಸೋರಾಶೀನ್ ಕಾಲಷಷ್ಠಾನ್ ಸ್ವಭಾವತಃ
ಪಂಚೈವತಾನಿಕಾಲಶ್ಚ ಭಾವಾಭಾವೌ ಚ ಕೇವಲೌ
ಅಷ್ಟೌಭೂತಾನಿ ಭೂತಾನಾಂ ಶಾಶ್ವತಾನಿಭವಾತ್ಯಯೌ

ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಚಿತ್ತ, ಮನಸ್ಸು, ಬುದ್ಧಿ, ಪ್ರಾಣ, ಸಾತ್ತ್ವಿಕ, ರಾಜಸ, ತಾಮಸಗಳೆಂಬ ಭಾವಗಳು, ಒಟ್ಟು ಹದಿನೇಳು ಗುಣಗಳು ಶರೀರವನ್ನು ಆಶ್ರಯಿಸಿವೆ. ಶರೀರದಲ್ಲಿರುವ ಆತ್ಮ ಹದಿನೆಂಟನೆಯದು. ಇದೇ ಜೀವಾತ್ಮ. ಜೀವಾತ್ಮದ ನಿಯೋಗವಾದೊಡನೆ ಶರೀರದ ಹದಿನೇಳು ಗುಣಗಳು ನಶಿಸುತ್ತವೆ. (ಅದೇ. ಪು. ೨೪೬೯).

ಇದು ಹದಿನೆಂಟು ತತ್ತ್ವಗಳನ್ನು ವಿವರಿಸುವ ಸಾಂಖ್ಯ.

ಈ ವಿವರಣೆಯ ನಂತರ ಇಪ್ಪತ್ತು ತತ್ತ್ವಗಳ ವಿಶ್ಲೇಷಣೆ ಇದೆ. ಮಹಾಭಾರತ ಕಾವ್ಯದಲ್ಲಿ ಈ ರೀತಿಯ ಹಲವು ತತ್ತ್ವಗಳ ವಿಚಾರ ಸರಣಿ ಇದೆ. ಇವೆಲ್ಲವೂ ತತ್ತ್ವಗಳ ಎಣಿಕೆಯಿಂದ ಪ್ರತಿಪಾದಿಸಲ್ಪಟ್ಟ ಪ್ರಮೇಯಗಳು.

ಭಾಗವತ ಗ್ರಂಥದಲ್ಲಿ ತತ್ತ್ವಗಳ ಸಂಖ್ಯೆಯನ್ನು ಕುರಿತ, ಸಾಂಖ್ಯದ ಒಂದು ಅಧ್ಯಾಯವಿದೆ. ತತ್ತ್ವಗಳು ಪರಸ್ಪರ ಒಂದರೊಳಗೊಂದು ಸೇರಿ, ಸಾಂಖ್ಯದ ವಕ್ತಾರರ ಪ್ರಕಾರ ಇಂತಿಷ್ಟು ಎಂದು ಪ್ರತಿಪಾದಿಸಲ್ಪಟ್ಟಿವೆ. ಭಾಗವತ ಗ್ರಂಥ ರಚನಕಾರನು "ಪರಸ್ಪರಾನುಪ್ರವೇಶಾತ್ತತ್ತ್ವನಾಂ ಪುರುಷರ್ಷಭ" ಎಂದಿದ್ದಾನೆ. ಈ ತತ್ತ್ವಗಳ ಸಂಖ್ಯೆ ಆಯಾ ದಾರ್ಶನಿಕರು ಕಂಡುಕೊಂಡ ಜ್ಞಾನದ ತಿರುಳು. ಕಾರ್ಯಕರಣ ಭಾವವೇ ಈ ತತ್ತ್ವಸಂಖ್ಯೆಯ ನಿರ್ಣಯಕ್ಕೆ ಮೂಲವೆನಿಸಿದೆ (ಶ್ರೀಹರಿ, ೨೦೦೬, ೩೩೧೯/೯).

ಏಕಸ್ಮಿನ್ನಪಿ ದೃಶ್ಯಂತೇ ಪ್ರವಿಷ್ಟಾನೀತರಾಣಿ ಚ
ಪೂರ್ವಸ್ಮಿನ್ ವಾಪರಸ್ಮಿನ್ ವಾ ತತ್ತ್ವೇ ತತ್ತ್ವಾನಿ ಸರ್ವಶಃ

ಸಾಂಖ್ಯದಲ್ಲಿ ಅಂತಿಮವಾಗಿ ಇಪ್ಪತ್ತೈದು-ಇಪ್ಪತ್ತಾರು ತತ್ತ್ವಗಳುಳ್ಳ ದರ್ಶನವು ನಿರೀಶ್ವರ ಸಾಂಖ್ಯ, ಸೇಶ್ವರಸಾಂಖ್ಯ (ಆಚರಣೆಯಲ್ಲಿ ಯೋಗ) ಎಂದು ಪ್ರಚಾರದಲ್ಲಿವೆ. ಇವೆರಡರ ಪೂರ್ವಾಪರಗಳನ್ನು ತಿಳಿಯುವ ಮುನ್ನ ಭಾಗವತ ರಚನಕಾರನು ವಿವರಿಸಿದ ಕೆಲವು ಸಾಂಖ್ಯ ತತ್ತ್ವಗಳನ್ನು ಅವುಗಳ ಉಲ್ಲೇಖದೊಂದಿಗೆ ಇಲ್ಲಿ ಕಾಣಬಹುದು. (ಅದೇ, ಪು. ೩೩೨೨-೩೩೨೫).

**ತತ್ತ್ವಗಳು-ಹದಿನೇಳು** : ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚ ಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಆತ್ಮ.

ಸಂಖ್ಯಾನೇ ಸಪ್ತದಶಕೇ ಭೂತ ಮಾತ್ರೇಂದ್ರಿಯಾಣಿ ಚ
ಪಂಚ ಪಂಚೈಕ ಮನಸಾ ಆತ್ಮಾ ಸಪ್ತದಶಃ ಸ್ಮೃತಃ

**ತತ್ತ್ವಗಳು-ಹದಿನಾರು** : ಪಂಚ ಭೂತಗಳು, ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯಗಳು ಮತ್ತು ಆತ್ಮ; ಮನಸ್ಸೇ ಆತ್ಮವೆನ್ನಲಾಗಿದೆ.

ತದ್ವತ್ ಷೋಡಶ ಸಂಖ್ಯಾನೇ ಆತ್ಮೇವ ಮನ ಉಚ್ಯತೇ

**ತತ್ತ್ವಗಳು-ಹದಿಮೂರು** : ಪಂಚೇಂದ್ರಿಯಗಳು, ಪಂಚಭೂತಗಳು, ಮನಸ್ಸು, ಆತ್ಮ ಮತ್ತು ಪರಮಾತ್ಮ.

-ಭೂತೇಂದ್ರಿಯಾಣಿ ಪಂಚೈವ ಮನ ಆತ್ಮಾ ತ್ರಯೋದಶ

**ತತ್ತ್ವಗಳು-ಹನ್ನೊಂದು** : ಪಂಚೇಂದ್ರಿಯಗಳು, ಪಂಚಭೂತಗಳು ಹಾಗೂ ಆತ್ಮ.

-ಏಕಾದಶಶ್ಚ ಆತ್ಮಾಸೌ ಮಹಾಭೂತೇಂದ್ರಿಯಾಣಿ ಚ

**ತತ್ತ್ವಗಳು-ಒಂಬತ್ತು** : ಪ್ರಕೃತಿ, ಮಹತ್, ಅಹಂಕಾರ, ಪಂಚತನ್ಮಾತ್ರೆ ಹಾಗೂ ಆತ್ಮ; ಆತ್ಮವೇ ಪುರುಷ ಸ್ವರೂಪ.

-ಅಷ್ಟೌ ಪ್ರಕೃತಿಯಶ್ಚೈವ ಪುರುಷಶ್ಚನವೇತ್ಯಥ

**ತತ್ತ್ವಗಳು–ಏಳು:** ಆಕಾಶ, ವಾಯು, ತೇಜಸ್ಸು, ಜಲ, ಪೃಥಿಃ–ಪಂಚಭೂತಗಳು ಜೀವಾತ್ಮ ಮತ್ತು ಪರಮಾತ್ಮ.

–ಸಪ್ತೈವಧಾತವಃ ಇತಿ ತತ್ತ್ವಾರ್ಥಾಃ ಪಂಚಖಾದಯಃ
ಜ್ಞಾನಮಾತ್ಮೋ ಭಯಾಧಾರಸ್ತತ್ತೋ ದೇಹೇಂದ್ರಿಯಾಸವಃ

**ತತ್ತ್ವಗಳು–ಆರು** : ಪಂಚಭೂತಗಳು ಹಾಗೂ ಪರಮಾತ್ಮ; ಪಂಚಭೂತಗಳೊಡನೆ ದೇಹದಲ್ಲಿ ಜೀವಾತ್ಮನಾದ ಪರಮಾತ್ಮ.

–ಷಡಿತ್ರಾಪಿ ಭೂತಾನಿ ಪಂಚ ಷಷ್ಠಃ ಪರಾಪುಮಾನ್

ತೈಯುರ್ಯುಕ್ತಃ ಆತ್ಮಸಂಭೂತೈಃ ಸೃಷ್ಟ್ವೇದಂ ಸಮುಪಾವಿಶತ್

**ತತ್ತ್ವಗಳು–ನಾಲ್ಕು:** ಆತ್ಮನಿಂದ ತೇಜಸ್ತು – ಜಲ – ಪೃಥ್ವೀಗಳ ಉತ್ಪತ್ತಿ. ಈ ನಾಲ್ಕು ತತ್ತ್ವಗಳಿಂದಲೇ ಸಮಸ್ತ ಜಗತ್ ಸೃಷ್ಟಿ.

–ಚತ್ವಾರ್ಯೇವೇತಿ ತತ್ರಾಪಿ ತೇಜ ಆಪೋಽನ್ನಮಾತ್ಮನಃ

ಜಾತಾನಿತೈರಿದಂ ಜಾತಂ ಜನ್ಮಾದಯ ವಿನಃ ಖಲು

**ತತ್ತ್ವಗಳು – ಇಪ್ಪತ್ತೈದು** : ಮೂಲ ಪ್ರಕೃತಿಯೇ ಅವ್ಯಕ್ತ, ಮಹತ್ತು, ಅಹಂಕಾರ, ಪಂಚತನ್ಮಾತ್ರೆಗಳು, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಮನಸ್ಸು, ಪಂಚಮಹಾಭೂತಗಳು ಹಾಗೂ ಜೀವಾತ್ಮ.

**ತತ್ತ್ವಗಳು–ಇಪ್ಪತ್ತಾರು** : ಮೇಲಿನ ಇಪ್ಪತ್ತೈದರ ಪಟ್ಟಿಯೊಂದಿಗೆ ಪರಮಾತ್ಮನೂ ಸೇರಿ ಇಪ್ಪತ್ತಾರು ತತ್ತ್ವಗಳು.

ಸಾಂಖ್ಯದಲ್ಲಿ ಮೊದಲಿಗೆ ಪ್ರತಿಪಾದಿಸಲಾದ ಇಪ್ಪತ್ತೈದು ತತ್ತ್ವಗಳನ್ನು ಪರಿಶೀಲಿಸಬೇಕು. ಇಪ್ಪತ್ತೈದು ತತ್ತ್ವಗಳನ್ನು ಮಹಾಭಾರತ ಕಾವ್ಯವು ಸಾಂಖ್ಯ ಮತ್ತು ಯೋಗ ದರ್ಶನಗಳಲ್ಲಿ ಸಮಾನವಾಗಿ ಪ್ರತಿಪಾದಿಸಿದೆ (ರಂಗಸ್ವಾಮೀ, ೧೯೮೨, ೨೧೬೬/೨೪).

ಪಂಚವಿಂಶತಿತತ್ತ್ವಾನಿ ತುಲ್ಯಾನ್ಯುಭಯತಃ ಸಮಂ
ಯೋಗೇ ಸಾಂಖ್ಯೇಪಿ ಚ ತಥಾ ವಿಶೇಷಂ ತತ್ರಮೇ ಶ್ರುಣು.

ಇಪ್ಪತ್ತೈದು ತತ್ತ್ವಗಳ ಹಿನ್ನೆಲೆಯಲ್ಲಿ ವ್ಯಕ್ತ–ಅವ್ಯಕ್ತ, ಪ್ರಕೃತಿ–ಪುರುಷ, ಕ್ಷರ–ಅಕ್ಷರಗಳ ನಡುವಣ ಸಂಬಂಧಗಳ ವಿಶ್ಲೇಷಣೆ ಇದೆ. ಮಹಾಭಾರತ ಕಾವ್ಯದ ಶಾಂತಿಪರ್ವದಲ್ಲಿ ಇವುಗಳನ್ನು ಹಲವೆಡೆ ಪ್ರಸ್ತಾಪಿಸಲಾಗಿದೆ. ಮೊದಲಿಗೆ ಎರಡೂ ದರ್ಶನಗಳಲ್ಲಿರುವ ಸಮಾನ ಅಂಶಗಳನ್ನೂ, ತತ್ತ್ವಗಳನ್ನೂ ಗುರುತಿಸಬೇಕು. ಆನಂತರ ತುಲನೆ ಸಾಧ್ಯ. ಆಗಮಗಳಲ್ಲಿ ಸೃಷ್ಟಿಯ ಆರಂಭ ಅವ್ಯಕ್ತದಿಂದ; ಆದರೆ, ಮೊದಲಿಗೆ ವ್ಯಕ್ತದ ಲಕ್ಷಣಗಳನ್ನು, ಆನಂತರ ಅವ್ಯಕ್ತವನ್ನು ಗುರುತಿಸುವುದು ಸುಲಭ ಹಾಗೂ ಗ್ರಾಹ್ಯ. ವ್ಯಕ್ತದ ಪ್ರಕಟಿತ

ಲಕ್ಷಣಗಳಾಗಿ ಜನ್ಮ, ವೃದ್ಧಿ, ಜರಾ, ಮೃತ್ಯುಗಳು ಹೆಸರಿಸಲ್ಪಟ್ಟಿವೆ. ಈ ಲಕ್ಷಣಗಳಿಂದ ಹೊರತಾದ್ದು ಅವ್ಯಕ್ತ. ಅವ್ಯಕ್ತದಿಂದ ವ್ಯಕ್ತವು ಹಂತವಾಗಿ ರೂಪ ಪಡೆಯುತ್ತದೆ. ವೇದ ಹಾಗೂ ಸಿದ್ಧಾಂತಗಳಲ್ಲಿ ಜೀವಾತ್ಮ ಮತ್ತು ಪರಮಾತ್ಮ ತತ್ತ್ವಗಳು ಹೇಳಲ್ಪಟ್ಟಿವೆ. ಜೀವಾತ್ಮವು ವ್ಯಕ್ತದೊಡನೆ ಪ್ರಕಟಗೊಳ್ಳುತ್ತದೆ. ಇದರೊಂದಿಗೆ ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಂಬಂಧಗಳಿವೆ. ವಿಷಯಸುಖಗಳಲ್ಲಿ ಆಸಕ್ತನಾದ ಜೀವಾತ್ಮವು ವಿಷಯಗಳಿಂದ ಮುಕ್ತವಾಗಿ ಸ್ವತಂತ್ರವಾಗಿ ನಿಲ್ಲುವುದೇ ಮೋಕ್ಷ ಅಥವಾ ಸಿದ್ಧಿ. (ಅದೇ, ಪು. ೨೧೬೭–೬೮)

ಇದನ್ನು ನಿರೀಶ್ವರ ಸಾಂಖ್ಯವೆನ್ನುತ್ತಾರೆ. ಇದನ್ನು ತಾತ್ತ್ವಿಕವಾಗಿ ವಿವರಿಸಬಹುದೇ ವಿನಾ ಆಚರಣೆಯ ಹಂತಗಳೇನು ಎಂದು ವಿವರಿಸಲಾಗದು. "ಪದ್ಮಪತ್ರಮಿವಾಂಭಸಿ"– ಎನ್ನುವಲ್ಲಿ ಈ ಬಾಳ್ವೆಯ ಹಂತಗಳನ್ನು ವಿವರಿಸುವುದೆಂತು?

ಸಾಂಖ್ಯ ದರ್ಶನ ಮೇತಾವತ್ಪರಿ ಸಂಖ್ಯಾನುದರ್ಶನಂ
ಸಾಂಖ್ಯಾಃ ಪ್ರಕುರ್ವತೇ ಚೈವ ಪ್ರಕೃತಿಂ ಚ ಪ್ರಚಕ್ಷತೇ

ಸಾಂಖ್ಯದ ದಾರ್ಶನಿಕರು ತತ್ತ್ವಗಳ ಸಂಖ್ಯೆಯನ್ನು ಎಣಿಸಿ ಚರಾಚರ ಜಗತ್ತಿಗೆ ಪ್ರಕೃತಿಯೇ ಕಾರಣವೆನ್ನುತ್ತಾರೆ. ಇದನ್ನು ಸಾಂಖ್ಯ ದರ್ಶನವೆಂದು ಪ್ರತಿಪಾದಿಸುತ್ತಾರೆ. ಈ ಹಂತದಲ್ಲಿ ಪ್ರಕೃತಿ–ಪುರುಷರ ಸಂಬಂಧಗಳನ್ನು ಗಮನಿಸಬೇಕು. ಅವ್ಯಕ್ತದಿಂದ ಆರಂಭವಾಗುವ ತತ್ತ್ವಗಳನ್ನೊಳಗೊಂಡಿರುವುದು ಪ್ರಕೃತಿ. ಪುರುಷನಿಗೆ ಅಸ್ತಿತ್ವವಿಲ್ಲ. ಪ್ರಕೃತಿಯ ತತ್ತ್ವಗಳು ಇಪ್ಪತ್ತನಾಲ್ಕು. ಇವು ಜಡತತ್ತ್ವಗಳು. ಇವುಗಳಿಗಿಂತ ಭಿನ್ನವಾದದ್ದು ಚೇತನ ಅಥವಾ ಪುರುಷ. ಇದನ್ನು ತತ್ತ್ವವೆಂದು ಕರೆಯಲಾಗದು.

ತತ್ತ್ವಾನಿ ಚ ಚತುರ್ವಿಂಶತ್ಪರಿಸಂಖ್ಯಾಯ ತತ್ತ್ವತಃ
ಸಾಂಖ್ಯಾಃ ಸಹ ಪ್ರಕೃತ್ಯಾತು ನಿಸ್ತತ್ತ್ವಃ ಪಂಚವಿಂಶಕಃ

ಚೇತನವನ್ನು ನಿಸ್ತತ್ವವೆಂದು ಗುರುತಿಸಿದ್ದರೂ ಇವನು ಇಪ್ಪತ್ತೈದನೆಯವನು. ಇವನಿಗೆ ಪ್ರಕೃತಿಯ ಅರಿವುಂಟಾದಾಗ ಮುಮುಕ್ಷತ್ವ, ಎಲ್ಲರ ಶರೀರದಲ್ಲಿರುವ ಪುರುಷ ಅಥವಾ ಇಪ್ಪತ್ತೈದನೆಯ ಚೇತನವನ್ನು ಪ್ರಕೃತಿಯ ಸಂಬಂಧದಿಂದ, ತತ್ತ್ವಗಳಿಂದ, ಮುಕ್ತಗೊಳಿಸಬೇಕು. ಅದೇ ಸಾಂಖ್ಯ ದರ್ಶನದ ತಿರುಳು (ರಂಗಸ್ವಾಮೀ, ೧೯೮೨, ೨೮೫೩/೨೫).

ಪಂಚವಿಂಶತಿಕಸ್ಯಾಸ್ಯ ಯೋಽಯಂ ದೇಹೇಷು ವರ್ತತೇ
ಏಷ ಮೋಕ್ಷಯಿತವ್ಯೇತಿ ಪ್ರಾಹುರವ್ಯಕ್ತಗೋಚರಾತ್

ಚೇತನ ಅಥವಾ ಪುರುಷನನ್ನು ನಿಸ್ತತ್ತ್ವ ಎಂದು ಗುರುತಿಸಲಾಗಿದೆಯಷ್ಟೆ. ಈ ಇಪ್ಪತ್ತೈದನೆಯ ತತ್ತ್ವವೇ ಪರಮಾತ್ಮ ಅಥವಾ ಪರಮಾತ್ಮನ ಅಂಶ ಎನ್ನುವುದು ಯೋಗದ ಮೊದಲ ಹಂತ. ಅವನೇ ವಿಷ್ಣು ಸ್ವರೂಪ, ವಿಷ್ಣುವಿನ ಅಂಶ ಎಂದು ಯೋಗದ ತಾತ್ತ್ವಿಕ ಪ್ರತಿಪಾದನೆ. ಇದು ೨೫ ತತ್ತ್ವಗಳ ಯೋಗದರ್ಶನ.

ಪಂಚವಿಂಶತಿ ಮೋ ವಿಷ್ಣುರ್ನಿಸ್ತತ್ವಸ್ತತ್ತ್ವಸಂಜ್ಞಿತಃ
ತತ್ತ್ವಸಂಶ್ರಯಣಾದೇತತತ್ತ್ವಮಾಹುರ್ಮನೀಷಿಣಃ

ವಿಷ್ಣುವು ತತ್ತ್ವಗಳಿಗೆ ಅತೀತನಾದರೂ ತತ್ತ್ವಗಳಿಗೆ ಆಶ್ರಯ ನೀಡಿರುವುದರಿಂದ ಅವನೂ ಸಹ ತತ್ತ್ವವೇ ಎನ್ನುವುದು ಯೋಗದ ನಿಲುವು.

ವ್ಯಕ್ತವು ನಶ್ವರದಿಂದ ಸೃಷ್ಟಿಸಲ್ಪಟ್ಟಿದ್ದು ಮೂರ್ತರೂಪವನ್ನು ಪಡೆದಿದೆ. ಇಪ್ಪತ್ತನಾಲ್ಕು ತತ್ತ್ವಗಳಿಗೆ ಅವ್ಯಕ್ತವೇ ಮೂಲವೆನಿಸಿದರೂ, ಇಪ್ಪತ್ತೈದನೆಯ ತತ್ತ್ವ ಅಮೂರ್ತವಾದ ಪರಮಾತ್ಮತತ್ತ್ವ (ಅದೇ, ಪು. ೨೭೯೧/೨೫).

ಮಹಾಭಾರತ ಕಾವ್ಯದಲ್ಲಿ ವಿವರಿಸಲಾದ ನಿರೀಶ್ವರ ಸಾಂಖ್ಯದ ಇಪ್ಪತ್ತನಾಲ್ಕು ಮತ್ತು ಇಪ್ಪತ್ತೈದು ತತ್ತ್ವಗಳನ್ನು ಈಶ್ವರಕೃಷ್ಣನು ಸಾಂಖ್ಯಕಾರಿಕೆಯಲ್ಲಿ ಎಪ್ಪತ್ತಮೂರು (ಎಪ್ಪತ್ತು?) ಶ್ಲೋಕಗಳಲ್ಲಿ ವಿವರಿಸಿದ್ದಾನೆ. ಅಲ್ಪ ಶಬ್ದಗಳಿಂದ ಬಹು ಅರ್ಥವನ್ನು ಸೂಚಿಸುವ ಶ್ಲೋಕಗಳಿಗೆ ಕಾರಿಕೆಗಳೆಂದು ಹೆಸರು.

–"ಕಾರಿಕಾ ತು ಸ್ವಲ್ಪ ವೃತ್ತಾ ಬಹುರರ್ಥ ಸೂಚಿನೀ"

ಸೂತ್ರಗಳಿಗೂ ಕಾರಿಕೆಗಳಿಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಸೂತ್ರಗಳು ಗದ್ಯರೂಪ ದಲ್ಲಿರುತ್ತವೆ. ಕಾರಿಕೆಗಳ ಮೇಲೆ ಭಾಷ್ಯರಚನೆಗಳನ್ನೂ ಕಾಣಬಹುದು.

ತತ್ತ್ವಶಾಸ್ತ್ರಜ್ಞರಲ್ಲಿ ಸಾಂಖ್ಯದರ್ಶನವು ಇಂದು ಚಲಾವಣೆಯಲ್ಲಿಲ್ಲದ ದರ್ಶನ ಶಾಸ್ತ್ರ ಎಂಬ ಅಭಿಪ್ರಾಯವಿದೆ (ಹಿರಿಯಣ್ಣ, ೨೦೦೪, ೨೭೩). ಇಂತಹ ಪರಿಸ್ಥಿತಿಗೆ ಬಹುಶಃ ಸಾಂಖ್ಯದ ಬಹುಮುಖೀ ಅಂತರಶಿಸ್ತೀಯ ಅಧ್ಯಯನದ ಕೊರತೆಯೇ ಕಾರಣವಿರಬಹುದು.

ಪರಮಾತ್ಮನ ಸ್ವರೂಪವು ನಿರಾಕಾರದಿಂದ ಸಾಕಾರದೆಡೆಗೆ ಜಾರುವ ಪರಿವರ್ತನೆಯ ಹಾದಿಯ ಹಂತಗಳನ್ನು ಗುರುತಿಸುವಾಗ, ಮೊದಲಿಗೆ ಸಾಂಖ್ಯದ ಅರಿವು ಅಗತ್ಯ. ವೈಷ್ಣವಾಗಮಗಳು, ಶೈವಸಿದ್ಧಾಂತಗಳು, ಈ ತಾತ್ತ್ವಿಕ ತಳಹದಿಯ ಮೇಲೆ, ತಮ್ಮ ಚಿಂತನೆಗಳನ್ನೂ ಬೆಳೆಸಿ, ಪ್ರತ್ಯೇಕ ತತ್ತ್ವಗಳನ್ನು ಅವಲಂಬಿಸಿ ಬೆಳೆದವು. ಈಶ್ವರಕೃಷ್ಣನ ಸಾಂಖ್ಯಕಾರಿಕೆಗೆ ಮೂಲ ದ್ರವ್ಯ ಮಹಾಭಾರತ ಕಾವ್ಯದಿಂದ ಒದಗಿದೆ. ಚಾರಿತ್ರಿಕವಾಗಿ ಮಹಾಭಾರತ ಅಥವಾ ಮಹಾಭಾರತ ಕಾವ್ಯದ ಕಾಲವೇ ಸಾಂಖ್ಯಕ್ಕೆ ಒಂದು ಪ್ರಮುಖ ಘಟ್ಟ. ಸಾಂಖ್ಯದ ವಿಸ್ತಾರವಾದ ಬೆಳವಣಿಗೆಯನ್ನು ಇಲ್ಲಿ ಕಾಣಬಹುದು. ಈಶ್ವರ ಕೃಷ್ಣನ ಕಾಲವನ್ನು ವಿದ್ವಾಂಸರು ಕ್ರಿ.ಶ. ಮೂರು ಅಥವಾ ನಾಲ್ಕನೆಯ ಶತಮಾನವೆಂದು ನಿರ್ಧರಿಸಿದ್ದಾರೆ. ಇವನು ವಸುಬಂಧುವಿಗಿಂತ ಪ್ರಾಚೀನ ಎಂಬ ಅಭಿಪ್ರಾಯವಿದೆ. (ಸತ್ಕಾರಿಶರ್ಮ, ೧೯೯೪, ೫–೬) ಕೆಲವರು ಇವನನ್ನು ಕ್ರಿ.ಶ. ಒಂದನೆಯ ಶತಮಾನದವರೆಗೆ ಎಳೆದೊಯ್ದಿದ್ದಾರೆ. ಇವನ ಕಾಲವನ್ನು ಕುರಿತು ಭಿನ್ನ ಅಭಿಪ್ರಾಯಗಳಂತೂ ಇವೆ. ಆದರೆ, ಸಾಂಖ್ಯಕ್ಕೆ ಸಂಬಂಧಿಸಿದ ಸೂತ್ರ, ಕಾರಿಕಾ, ಭಾಷ್ಯಗಳಲ್ಲಿ, ಸಾಂಖ್ಯಕಾರಿಕಾ ಪ್ರಾಚೀನವಾದುದು ಎನ್ನುವಲ್ಲಿ ಅನುಮಾನವಿಲ್ಲ. ಆದ್ದರಿಂದ

ಈ ಗ್ರಂಥ ಮಹತ್ತ್ವದ್ದೆನಿಸಿದೆ. ಈ ಕಾರಿಕೆಗೆ ಸುವರ್ಣ ಸಪ್ತತಿ, ಕನಕ ಸಪ್ತತಿ, ಕನಗ ಸತ್ತಂ ಎಂಬ ಪರ್ಯಾಯ ನಾಮಗಳಿವೆ. ಬೌದ್ಧ ವಿದ್ವಾಂಸ ವಸುಬಂಧು, ಈಶ್ವರಕೃಷ್ಣನ ಸಾಂಖ್ಯಕಾರಿಕೆಯನ್ನು ಖಂಡಿಸಿ "ಪರಮಾರ್ಥ ಸಪ್ತತಿ" ಎಂಬ ಕೃತಿಯನ್ನು ರಚಿಸಿದ್ದಾನೆ. ಪ್ರಸ್ತುತ ಲಭ್ಯವಿರುವ ಸಾಂಖ್ಯಕಾರಿಕೆಯಲ್ಲಿ ೭೨ ಅಥವಾ ೭೩ ಕಾರಿಕೆಗಳಿದ್ದರೂ, ಮೂಲತಃ ಎಪ್ಪತ್ತು ಕಾರಿಕೆಗಳುಳ್ಳದ್ದು ಎಂಬ ಅಭಿಪ್ರಾಯವನ್ನು ವಿದ್ವಾಂಸರು ಅನುಮೋದಿಸಿದ್ದಾರೆ. ಈ ಗ್ರಂಥ ಚೀಣೀ ಭಾಷೆಗೂ ಅನುವಾದಗೊಂಡಿತ್ತು. ಹಲವು ಭಿನ್ನ ಅಭಿಪ್ರಾಯಗಳಿದ್ದರೂ ಸಾಂಖ್ಯಕಾರಿಕೆಯು ಸಾಂಖ್ಯದ ಇತಿಹಾಸದಲ್ಲಿ ಮೈಲಿಗಲ್ಲಾಗಿ ನಿಂತಿದೆ.

ಸಾಂಖ್ಯಕಾರಿಕೆಯ ಮೊದಲ ಸೂತ್ರ ದುಃಖವನ್ನು ಕುರಿತೇ ಆರಂಭಗೊಳ್ಳುತ್ತದೆ. ದರ್ಶನಗಳ ಗುರಿಯು ದುಃಖಾಂತವೇ ಆಗಿದೆ. ತ್ರಿವಿಧ ದುಃಖಗಳನ್ನೂ ಗುರುತಿಸಲಾಗಿದೆ. ದುಃಖದಿಂದ ಆರಂಭಗೊಂಡ ವಿವರಣೆ, ಕೈವಲ್ಯದವರೆಗೆ ಹಲವು ಹಂತಗಳಲ್ಲಿ ಸಾಗುತ್ತದೆ. ಬುದ್ಧ ಸಂಸಾರದೊಳಗಿನ ದುಃಖಕ್ಕೆ ಮೂಲವನ್ನು ಶೋಧಿಸುವ ಸಲುವಾಗಿ ತನ್ನ ಚಿಂತನೆಯನ್ನು ಆರಂಭಿಸಿದ. ದುಃಖದೊಂದಿಗೆ ಆರಂಭಿಸಿದ ಈಶ್ವರಕೃಷ್ಣನ ನಿರ್ವಚನ ವಸುಬಂಧುವಿಗೆ ಪ್ರೇರಣೆಯಾಯಿತೇ? ಮಹಾಭಾರತದಲ್ಲಿ ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳಿಗೆ ಸಂಬಂಧಿಸಿದಂತೆ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ವಿವರಗಳಿವೆ. ವ್ಯಕ್ತ, ಅವ್ಯಕ್ತ, ಅಹಂಕಾರ, ಮನಸ್ಸು ಇತ್ಯಾದಿಗಳಿಗೂ ವಿವರಣೆಗಳಿವೆ. ಈಶ್ವರಕೃಷ್ಣ ಕೆಲವು ವಿಚಾರಗಳನ್ನು ಮಹಾಭಾರತ ಕಾವ್ಯದಿಂದ ಆಯ್ದು ಮಂಡಿಸಿದ್ದಾನೆ.

ಮೊದಲಿಗೆ ಮೂಲ ಪ್ರಕೃತಿ (ಪ್ರಧಾನ); ಪ್ರಕೃತಿಯ ವಿಕೃತಿಗಳು ಏಳು; ಬುದ್ಧಿ, ಅಹಂಕಾರ ಮತ್ತು ಐದು ತನ್ಮಾತ್ರೆಗಳು. ಪ್ರಕೃತಿಯ ವಿಕೃತಿಗಳು ಹದಿನಾರು ; ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಮನಸ್ಸು ಹಾಗೂ ಪಂಚಭೂತಗಳು. ಪ್ರಕೃತಿಯ ವಿಕೃತಿ, ವಿಕಾರಗಳಿಗೆ ಹೊರತಾದದ್ದು ಪುರುಷ. ಪುರುಷನೇ ಚೇತನ ಸ್ವರೂಪಿ ; ಉಳಿದದ್ದು ಜಡಪದಾರ್ಥ, ಒಟ್ಟು ಇಪ್ಪತ್ತೈದು ತತ್ತ್ವಗಳು. ಪ್ರಮಾಣಗಳು ಮೂರು ಬಗೆಯವು : ದೃಶ್ಯ, ಅನುಮಾನ, ಆಪ್ತವಚನ; ಈ ಮೂರನ್ನು ಅನುಸರಿಸಿ ಪ್ರಮೇಯ ಸಿದ್ಧಿ ಸಾಧ್ಯ. ಪ್ರಕೃತಿ, ಪುರುಷರ ಅಸ್ತಿತ್ವದ ಸಿದ್ಧಾಂತಕ್ಕಾಗಿ ಮೂರು ಬಗೆಯ ಗುಣಗಳು ಹಾಗೂ ಲಕ್ಷಣಗಳನ್ನು ಹೇಳಿದ್ದಾನೆ. ವ್ಯಕ್ತ ಅಥವಾ ಪ್ರಧಾನವು ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಗುಣ, ಸ್ವಭಾವಗಳನ್ನುಳ್ಳದ್ದು. ಇವು ಪ್ರೀತಿ, ದೋಷ, ವಿಷಾದ ಭಾವಗಳನ್ನು ಸೂಚಿಸುವಂಥದ್ದು. ಇವುಗಳು ಪರಸ್ಪರ ಅವಿನಾಭಾವ ಸಂಬಂಧ ಹೊಂದಿರುವಂಥದ್ದು.

ಅನ್ಯೋನ್ಯ ಅಭಿಭವ ಆಶ್ರಯ ಜನನ ಮಿಥುನ ವೃತ್ತಯಶ್ಚ ಗುಣಾಃ

ಇದು ಸಾಂಖ್ಯಕಾರಿಕೆಯ ಹನ್ನೆರಡನೆಯ ಉಕ್ತಿ. ಇದಕ್ಕೆ ಸಂವಾದಿಯಾದ ಉಲ್ಲೇಖವನ್ನು ಮಹಾಭಾರತದ ಅಶ್ವಮೇಧಿಕಾಪರ್ವದಲ್ಲಿಯೂ ಕಾಣಬಹುದು.

ತಮೋರಜಸ್ತಥಾ ಸತ್ತ್ವಂ ಗುಣಾವೇತಾನ್ಪ್ರ ಚಕ್ಷತೇ
ಅನ್ಯೋನ್ಯಮಿಥುನಾಃ ಸರ್ವೇ ತಥಾನ್ಯೋನ್ಯಾನು ಜೀವಿನಃ

ಅನ್ಯೋನ್ಯಾಪಾಶ್ರಯಾಶ್ಚಾಪಿ ತಥೋನ್ಯಾನುವರ್ತಿನಃ
ಅನ್ಯೋನ್ಯವ್ಯತಿಷಕ್ತಾಶ್ಚ ತ್ರಿಗುಣಾಃ ಪಂಚಧಾತವಃ

(ರಂಗಸ್ವಾಮೀ, ೧೯೮೫, ೫೮೨೨/೩೦)

ಸತ್ತ್ವ ಎನ್ನುವುದು ಶುದ್ಧ ಮತ್ತು ಸೂಕ್ಷ್ಮವಾದುದು. ರಜಸ್ಸು ಕ್ರಿಯಾತ್ಮಕ ಹಾಗೂ ಚಲನಾತ್ಮಕವಾದದ್ದು, ತಮಸ್ಸು ಮಾಂದ್ಯ ಹಾಗೂ ಜಡತ್ವವನ್ನು ಸೂಚಿಸುವಂಥದ್ದು. ಸಾಂಖ್ಯಕಾರಿಕೆಯ ಹದಿಮೂರನೆಯ ಶ್ಲೋಕ ಕೆಳಕಂಡಂತಿದೆ.

ಸತ್ತ್ವಂ ಲಘು ಪ್ರಕಾಶಕಂ ಇಷ್ಟಂ ಉಪಷ್ಟಂಬಕಂ ಚಲಂ ಚ ರಜಃ
ಗುರು ವರಣಕಮೇವ ತಮಃ ಪ್ರದೀಪವಚ್ಚಾರ್ಥತೋ ವೃತ್ತಿಃ

ಇವು ಪರಸ್ಪರ ಭಿನ್ನವೆಂದು ತೋರಿದರೂ ಸಹವರ್ತನೆಯಿಂದ ಸಾಮರಸ್ಯವುಳ್ಳ ಒಂದೇ ಘಟಕದಂತೆ ವರ್ತಿಸುತ್ತವೆ. ಇದನ್ನೇ 'ಅನ್ಯೋನ್ಯಾನುವರ್ತಿನಃ' ಎಂದಿದೆ. ಪುರುಷನು ಬಹುರೂಪಿ; ಮೂರು ಗುಣಗಳ ವೈಪರೀತ್ಯದಿಂದ ಬಹುರೂಪಿಯಾಗಿ ಜನನ ಮರಣಗಳೆಂಬ ಕರಣಗಳ ಮಧ್ಯೆ ಬಂಧಿತನಾಗಿದ್ದಾನೆ (ಕಾರಿಕೆ : ೧೮).

ಜನನ ಮರಣ ಕರಣಾನಾಂ ಪ್ರತಿನಿಯಮಾದಯುಗಪತ್ ಪ್ರವೃತ್ತೇಶ್ಚ
ಪುರುಷ ಬಹುತ್ವಂ ಸಿದ್ಧಂ ತ್ರೈಗುಣ್ಯವಿಪರ್ಯಯಾಚ್ಚೆವ

ಪ್ರಕೃತಿ ಎಂಬ ಜಡಪದಾರ್ಥಕ್ಕೆ ಪುರುಷ ಸಂಯೋಗದಿಂದಲೇ ದರ್ಶನ ಪ್ರಾಪ್ತಿ. ಪುರುಷ ಅಥವಾ ಚೇತನನಿಗೆ ಪ್ರಕೃತಿಯೆ ಸಂಯೋಗ, ನಿಯೋಗದಿಂದ ಹಾಗೂ ಅದರ ಅರಿವಿನಿಂದ ಕೈವಲ್ಯ ಪ್ರಾಪ್ತಿ. ಈ ದರ್ಶನ ಕೈವಲ್ಯಗಳನ್ನು ಸಾಧಿಸಲು ಕುರುಡನಿಗೆ ಹೆಳವ ನೆರವು. ಇಲ್ಲಿ ಪರಸ್ಪರ ಅವಲಂಬನೆ ಇದೆ. ಇದು ಈಶ್ವರಕೃಷ್ಣನ ಹೇಳಿಕೆ (ಕಾರಿಕೆ : ೨೧)

ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾಪ್ರದಾನಸ್ಯ
ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಃ ಸರ್ಗಃ

"ಕುರುಡನ ಹೆಗಲ ಮೇಲೆ ಕುಂಟ ಕುಳಿತಿದ್ದಾನೆ. ದಾರಿ ಸಾಗುವುದೆಂತು ನೋಡಬೇಕು." ಈ ಸಾಂಖ್ಯದ ವಿವರಣೆಯನ್ನು ಹಲವು ದಾರ್ಶನಿಕರು ಗಮನಿಸಿದ್ದಾರೆ. ಷಡ್‌ದರ್ಶನ ಸಮುಚ್ಚಯದಲ್ಲಿ ಹರಿಭದ್ರ ಸೂರಿ, ಈ ಸಂಬಂಧವನ್ನು ಪುನಃ ಉಲ್ಲೇಖಿಸಿದ್ದಾನೆ. (ಆರ್ಯ, ೨೦೧೩, ೧೯).

ಪಂಚವಿಂಶತಿ ತತ್ತ್ವಾನಿ ಸಾಂಖ್ಯಸ್ಯೈವ ಭವಂತಿ ಚ
ಪ್ರಧಾನರಯೋಶ್ಚಾತ್ರ ವೃತ್ತಿಃ ಪಂಗ್ವಂಧಯೋರಿವ

ಈಶ್ವರ ಕೃಷ್ಣನ ಕಾರಿಕೆಗೆ ಸಂಬಂಧಿಸಿದಂತೆ ಗೌಡಪಾದರ ಭಾವಾರ್ಥ ಬೋಧಿಕಾ ಎಂಬ ಭಾಷ್ಯವಿದೆ. ಮಾಠರಾಚಾರ್ಯನ ಮಾಠರವೃತ್ತಿ ಇದೆ. ಜಯಮಂಗಲ ಎಂಬ ಟೀಕೆ ಇದೆ. ಇವಲ್ಲದೆ ಸಾಂಖ್ಯದರ್ಶನವನ್ನು ಕುರಿತ ಇನ್ನಿತರ ಗ್ರಂಥಗಳು ಕೆಳಕಂಡಂತಿವೆ (ವೀರಸಿಂಘೆ, ೧೯೯೩, ೨೩).

ವಾಚಸ್ಪತಿ ಮಿಶ್ರನ ಸಾಂಖ್ಯ ತತ್ತ್ವಕೌಮುದಿ, ನಾರಾಯಣ ತೀರ್ಥರ ಸಾಂಖ್ಯಚಂದ್ರಿಕಾ, ರಾಮಕೃಷ್ಣಭಟ್ಟಾಚಾರ್ಯನ ಸಾಂಖ್ಯಕೌಮುದಿ, ಮುಡುಂಬ ನರಸಿಂಹಸ್ವಾಮಿಯ ಸಾಂಖ್ಯತರುವಸಂತ, ಅಜ್ಞಾತಕರ್ತೃವಿನ ಯುಕ್ತಿದೀಪಿಕಾ. ಷಷ್ಠಿತಂತ್ರ ಹಾಗೂ ರಾಜ ವಾರ್ತಿಕ ಗ್ರಂಥಗಳ ಹೆಸರುಗಳಷ್ಟೇ ಪರಿಚಿತ. ಗ್ರಂಥಗಳೂ ಲಭ್ಯವಿಲ್ಲ; ಗ್ರಂಥಕಾರರೂ ತಿಳಿದಿಲ್ಲ.

ನಿರೀಶ್ವರ ಸಾಂಖ್ಯವನ್ನು ಸೋದಾಹರಣವಾಗಿ ಅರ್ಥ ಮಾಡಿಕೊಳ್ಳುವ ಪ್ರಯತ್ನ ಒಂದಿದೆ. ಪುರುಷ ನಿಸ್ತತ್ತ್ವ; ಸ್ವಯಂಪ್ರಕಾಶವಿಲ್ಲದವನು. ಇದನ್ನು ಸ್ಫಟಿಕಶಿಲೆ ಎನ್ನೋಣ; ಬಣ್ಣವಿಲ್ಲ, ಆಕಾರವಿಲ್ಲ; ಪ್ರಕೃತಿ ಸತ್ತ್ವ, ರಜಸ್, ತಮಸ್ ಗುಣಗಳ ಫಲವಾಗಿ ಹಲವಾರು ಬಣ್ಣ, ರೂಪ ತಳೆಯುತ್ತದೆ. ಪುರುಷನ ಅಸ್ತಿತ್ವವನ್ನು ಗುರುತಿಸುವಲ್ಲಿ ಪ್ರಕೃತಿಯೊಡನೆ ವ್ಯವಹರಿಸಲೇಬೇಕು.

ಪ್ರಕೃತಿಯ ಬಣ್ಣ ರೂಪದಿಂದಾಗಿ ಪುರುಷನೂ ಅದೇ ಬಣ್ಣ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಸ್ಫಟಿಕಶಿಲೆಯ ಹಿಂದೆ ಬಣ್ಣದ ಹೂವನ್ನು ಹಿಡಿದಾಗ, ಹಳದಿ ಬಣ್ಣವಿದ್ದರೆ ಸ್ಫಟಿಕವೂ ಹಳದಿಯಾಗಿಯೇ ಕಾಣುತ್ತದೆ ; ಕೆಂಪು ಹೂ ಹಿಡಿದಲ್ಲಿ ಕೆಂಪಾಗಿ ಕಾಣುತ್ತದೆ. ಈ ಬಣ್ಣ, ರೂಪಗಳು ಸ್ಫಟಿಕಕ್ಕೆ ಅಂಟಿಲ್ಲ. ಅಂಟಿಯೂ ಅಂಟದಂತೆ ಬದುಕುವುದು ನಿರೀಶ್ವರ ಸಾಂಖ್ಯ. ಹೂವನ್ನು ಹಿಂಸರಿಸಿದಾಗ ಪುರುಷ ಬಿಡುಗಡೆ ಹೊಂದುತ್ತಾನೆ. ಅದೇ ಮುಮುಕ್ಷುತ್ವ, ಮುಕ್ತಿ.

ಸಾಂಖ್ಯದ ಇಪ್ಪತ್ತೈದು ತತ್ತ್ವಗಳ ನಂತರ ಇಪ್ಪತ್ತಾರು ತತ್ತ್ವಗಳ ಸ್ವರೂಪವನ್ನು ತಿಳಿಯಬೇಕು. ಪ್ರಕೃತಿಯ ಇಪ್ಪತ್ತನಾಲ್ಕು ತತ್ತ್ವಗಳೊಂದಿಗೆ ಪ್ರಧಾನ ಅಥವಾ ಚೇತನನು ಇಪ್ಪತ್ತೈದನೆಯ ತತ್ತ್ವ ; ಪರಮಾತ್ಮ ತತ್ತ್ವವು ಇಪ್ಪತ್ತಾರನೆಯದು. ಇಪ್ಪತ್ತೈದನೆಯ ತತ್ತ್ವಕ್ಕೆ ಇಪ್ಪತ್ತನಾಲ್ಕು ತತ್ತ್ವಗಳ ಪ್ರಕೃತಿಯ ಅರಿವುಂಟು. ಆದರೆ ಪ್ರತ್ಯೇಕವಾಗಿ ಕಾಣಲಾಗದು. ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಚೇತನವು ಪ್ರಕೃತಿಯನ್ನು ಅನುಸರಿಸಬೇಕು. ಇದಕ್ಕೆ ಸಂಬಂಧಿಸಿದ ಸುಂದರ ಉಪಮೆ ಇದೆ. ಮೀನು ನೀರನ್ನು ಅನುಸರಿಸಿಕೊಂಡು ಸಾಗುತ್ತದೆ. ನೀರು ಹರಿದ ಕಡೆ ತಾನೂ ಸಾಗುತ್ತದೆ. ತಾನು ನೀರಿನಿಂದ ಪ್ರತ್ಯೇಕ ಎಂಬುದು ತಿಳಿದಿದೆ. ಆದರೆ ಮೀನು ನೀರನ್ನು ಬಿಟ್ಟು ಇರಲಾರದು. ಅದೇ ರೀತಿ ಚೇತನವು ಪ್ರಕೃತಿಯನ್ನು ಅನುಸರಿಸಬೇಕು. ಪ್ರಕೃತಿಯಿಂದ ತಾನು ಭಿನ್ನ ಎಂದು ಅರಿತ ಚೇತನ ಪರಮಾತ್ಮನೆಡೆಗೆ ಧಾವಿಸುತ್ತದೆ. ಇದು ಇಪ್ಪತ್ತಾರು ತತ್ತ್ವಗಳ ತಿರುಳು.

೨೪-೨೫-೨೬ ತತ್ತ್ವಗಳ ಸಾಂಖ್ಯ ಯೋಗವನ್ನು ಭಗವದ್ಗೀತೆಯು ಮತ್ತೊಂದು ರೂಪದಲ್ಲಿ ಬಣ್ಣಿಸಿದೆ. ಇಲ್ಲಿ ಪುರುಷತ್ರಯರ ಸ್ವರೂಪದ ವಿವರವಿದೆ.

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ
ಕ್ಷರಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ

ಈ ಲೋಕದಲ್ಲಿ ಇಬ್ಬರು ಪುರುಷರಿದ್ದಾರೆ. ಇಪ್ಪತ್ತನಾಲ್ಕು ತತ್ತ್ವಗಳಿಂದ ಕೂಡಿದ ದೇಹವೇ ಕ್ಷರ ಪುರುಷ; ಇವನು ಪ್ರಕೃತಿಯ ಗುಣಗಳನ್ನು ಮೈಗೂಡಿಸಿಕೊಂಡಿರುವವನು. ಇಪ್ಪತ್ತೈದನೆಯ ತತ್ತ್ವ ಎನಿಸಿದ ಮತ್ತೊಬ್ಬ ಪುರುಷನೇ ಅಕ್ಷರಪುರುಷ; ಇವನು ಎರಡನೆಯವನು. ಇವನು ಕ್ಷೇತ್ರಜ್ಞ; ಜೀವಾತ್ಮನೂ ಹೌದು. ದೇಹದೊಳಗೆ ಅಡಗಿರುವ ಅಂಗುಷ್ಠ ಮಾತ್ರ ಪುರುಷನೂ ಹೌದು. (೧೫-೧೬)

ಉತ್ತಮಃ ಪುರುಷ್ತ್ವನ್ಯಃ ಪರಮಾತ್ಮೇತ್ಯುದಾಹೃತಃ
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ

ಮೂರನೆಯವನಾದ ಪುರುಷ ಮತ್ತೊಬ್ಬನಿದ್ದಾನೆ. ಅವನೇ ಉತ್ತಮ ಪುರುಷ. ಅವನೇ ಪರಮಾತ್ಮ. ಕ್ಷರ ಮತ್ತು ಅಕ್ಷರ ಪುರುಷರನ್ನು ನಿಯಂತ್ರಿಸಬಲ್ಲವನು. ಇವನು ಮೂರು ಲೋಕಗಳನ್ನೂ ಪ್ರವೇಶಿಸಿ ಎಲ್ಲರ ಪಾಲನೆ, ರಕ್ಷಣೆಗಳನ್ನು ಕೈಗೊಳ್ಳುತ್ತಾನೆ (೧೫.೧೩).

ಮಹಾಭಾರತ ಕಾವ್ಯದಲ್ಲಿ ಮತ್ತೊಂದೆಡೆ ಕ್ಷರ ಮತ್ತು ಅಕ್ಷರ ಪುರುಷರ ಪರಿಚಯವಿದೆ. ಇಲ್ಲಿ ಅಕ್ಷರ ಪುರುಷನೇ ಪರಮಾತ್ಮನೆಂಬ ಭಾವವಿದೆ (ರಂಗಸ್ವಾಮೀ, ೧೯೮೨, ೨೧೯೦/೨೪).

ಅಕ್ಷರಂ ಚ ಕ್ಷರಂ ಚೈವ ದ್ವೈಧೀಭಾವೋಽಯಮಾತ್ಮನಃ
ಕ್ಷರಃ ಸರ್ವಭೂತೇಷು ದಿವ್ಯಂ ತಮೃತಮಕ್ಷರಂ

ಆಗಮಗಳಲ್ಲಿ ಸಾಂಖ್ಯದ ಕಿಂಚಿತ್ ದರ್ಶನವಿದೆಯೇ ಹೊರತು, ಹೆಚ್ಚು ಆಳಕ್ಕೆ ಇಳಿಯುವುದಿಲ್ಲ. ಶೈವಾಗಮಗಳಿಗಂತ ವೈಷ್ಣವಾಗಮಗಳು ಸಾಂಖ್ಯ ತತ್ತ್ವಗಳನ್ನು ಹೆಚ್ಚು ಒಪ್ಪಿಕೊಂಡಿವೆ. ಮಾರ್ಕಾಂಡೇಯ ಸಂಹಿತೆಯು ಗುರುತಿಸುವ ಅಷ್ಟೋತರ ಶತ ಸಂಹಿತೆಯಲ್ಲಿ "ಸಾಂಖ್ಯಮತ"ವೂ ಒಂದು. ಈ ಕೃತಿ ಅಲಭ್ಯ. ಕೆಲವು ಆಗಮಗಳು ಕ್ಷೇತ್ರ, ಕ್ಷೇತ್ರಜ್ಞರ ಪ್ರಮೇಯವನ್ನು ಯಥಾವತ್ತಾಗಿ ಸ್ವೀಕರಿಸಿವೆ. ಪಾದ್ಮಸಂಹಿತೆಯ ಉಲ್ಲೇಖ ಇಂತಿದೆ.

ಭೂತಾದಿ ಪಂಚ ಸಂಜಾತಂ ಕ್ಷೇತ್ರಂ ತತ್ರ ವ್ಯವಸ್ಥಿತಃ
ಜೀವೋಽಯಸ್ತಂವಿದುಃ ಪ್ರಾಜ್ಞಾಕ್ಷೇತ್ರಜ್ಞಂ ಪರಸಂಜ್ಞಿತಂ
(ಗೋಮಠಂ. ೧೯೭೬.೩೦/೧)

ಸಾಂಖ್ಯ ಮತ್ತು ಯೋಗದರ್ಶನಗಳಲ್ಲಿ ಅಂತಿಮವಾಗಿ ಕೊಂಚ ವಿಭಿನ್ನ ದೃಷ್ಟಿಗಳಿದ್ದಾಗ್ಯೂ, ಆಗಮಗಳು ಇಪ್ಪತ್ತೈದು ತತ್ತ್ವಗಳನ್ನೂ, ಎರಡು ದರ್ಶನಗಳನ್ನೂ ಒಪ್ಪಿಕೊಂಡಿವೆ.

ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ
ದಶೇಂದ್ರಿಯಾಣಿ ಶಬ್ದಾದ್ಯಾಭೂತೇತಾಃ ಪಂಚವಿಂಶತಿಃ

ಇದು ಆನಂದತೀರ್ಥರ (ಮಧ್ವಾಚಾರ್ಯರ) ತಂತ್ರಸಾರ ಸಂಗ್ರಹದ ಉಲ್ಲೇಖ. ಸಾಂಖ್ಯದ ಇಪ್ಪತ್ತೈದು ತತ್ತ್ವಗಳನ್ನು ಉಲ್ಲೇಖಿಸಿದರೂ ಇನ್ನಿತರ ವಿವರಗಳು ಅಸ್ಪಷ್ಟ. ಚಿಂತ್ಯಾಗಮದಲ್ಲಿ ಕ್ಷೇತ್ರಜ್ಞ, ಪುರುಷ, ಇಪ್ಪತ್ತೈದನೆಯ ತತ್ತ್ವವನ್ನು ಪರ್ಯಾಯ ಪದಗಳೆಂಬಂತೆ ಬಳಸಲಾಗಿದೆ.

–ಕ್ಷೇತ್ರಜ್ಞಃ ಪುರುಷಶ್ಚೈವ ಪಂಚವಿಂಶಕ ಇತ್ಯಪಿ.

ವಿಷ್ಣುಸಂಹಿತೆಯಲ್ಲಿ ಕ್ಷೇತ್ರಜ್ಞರ ನಿರ್ಣಯದೊಂದಿಗೆ ವಿಪುಲವಾದ ವಿಷಯ ಮಂಡನೆ ಇದೆ. ಅಂತಿಮ ಸಾಲುಗಳು ಸಾಂಖ್ಯಕಾರಿಕೆಯ ಪಡಿಯಚ್ಚು ಎಂದು ಗಮನಿಸಬಹುದು. (ಗಣಪತಿ ಶಾಸ್ತ್ರೀ, ೧೯೯೧. ೨೧)

ಸತ್ತ್ವಂ ಸುಖಂ ರಜೋ ದುಃಖಂ ತಮೋ ಮೋಹಪಶ್ಚತೇ ಗುಣಾಃ
ತೇಽನ್ಯೋನ್ಯಾಭಿಭವವ್ಯಕ್ತ ಮಿಥುನಾಶ್ರಯ ವೃತ್ತಯಃ ॥
ಲಘು ಪ್ರಕಾಶಕಂ ಸತ್ತ್ವಂ ಕ್ರಿಯಾ ನಿರ್ಬಂಧಕೃದ್‌ರಜಃ
ತಮೋಗುರು ನಿರೋಧ್ಯೇತೇ ಸಿತರಕ್ತಾಸಿತಾಃ ಸ್ಮೃತಾಃ ॥
ತ್ರಿಭಿರೇವ ಗುಣೈರೇತೈಃ ಪ್ರಕೃತಿರ್ಥೈ ಸಮನ್ವಿತಾಃ
ಸರ್ವೇ ಭಾವಾ ಭವಂತ್ಯೇತೇ ಶ್ರೇಷ್ಠ ಮಧ್ಯಮಕನ್ಯಸಾಃ ॥
ಪ್ರಕೃತೇ ಗುಣ ಸಂಯೋಗ ಭೇದೈರೇಕೋಽಪ್ಯನೇಕಧಾ
ನಿರ್ಗುಣೋಽಪಿ ಪುಮಾನ್ ಭಾತಿ ಸ್ಫಟಿಕೋಽನ್ಯೈರಿವಾನ್ವಿತಃ

ನಿರೀಶ್ವರ ಸಾಂಖ್ಯದ ಮೂಲಕ ಮುಕ್ತಿ ಅಥವಾ ಮೋಕ್ಷ ಸಿದ್ಧಿ ಸುಲಭ ಹಾದಿಯಲ್ಲ ಎನ್ನುವುದು ನಿಜ. ಇದೂ ಬೌದ್ಧರ ಹೀನಯಾನದಂತೆ ಜನಸಾಮಾನ್ಯರಿಂಧ ದೂರ ಉಳಿಯಿತು. ಸೇಶ್ವರ ಸಾಂಖ್ಯ ಮೆಲ್ಲಗೆ ಅಡಿ ಇಡುತ್ತಾ ವಿಗ್ರಹಾರಾಧನೆ ಕಡೆಗೆ ವಾಲಿತು. ಇದು ಜನಸಾಮಾನ್ಯರಿಗೆ ಪ್ರಿಯವೆನಿಸಿತು. ಯೋಗದ ಸಾಧನೆಯ ಮಾರ್ಗವನ್ನು ಆಗಮಗಳಲ್ಲಿ ಯೋಗಪಾದದಲ್ಲಿ ವಿವರಿಸಲಾಗಿದೆ. ಇದು ಸಾಂಖ್ಯ ಮತ್ತು ಸಾಂಖ್ಯ ದರ್ಶನಗಳು ನಡೆದುಬಂದ ದಾರಿ ಎನಿಸಿದೆ. ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗದಲ್ಲೊಂದು ಪದ್ಯವಿದೆ. ಇದು ನಿರೀಶ್ವರ ಸಾಂಖ್ಯದ ಝಲಕ್. ಭಿತ್ತಿಯ ಮೇಲಿನ ಚಿತ್ರ ಕುರಿತದ್ದು. ಕ್ಷರ-ಅಕ್ಷರಗಳ ನಡುವಣ ಸಂಬಂಧವನ್ನೂ ಹೇಳುತ್ತದೆ.

ಭಿತ್ತಿಯೊಂದಿಲ್ಲದಿರೆ ಚಿತ್ರಮೆಂತಹುದು ?
ಚಿತ್ರ(ತ್ರ)ವಿಲ್ಲದ ಭಿತ್ತಿ ಸೊಗಸಹುದೆಂತು ?
ನಿತ್ಯಸತ್ಯವೆ ಭಿತ್ತಿ, ಜೀವಿತಕ್ಷಣ ಚಿತ್ರ
ತತ್ತ್ವವೀ ಸಂಬಂಧ –ಮಂಕುತಿಮ್ಮ (೧೦೫)

ಭಿತ್ತಿ ಶಾಶ್ವತವಾದದ್ದು (ಅಕ್ಷರ), ಭಿತ್ತಿಯ ಚಿತ್ರ ಕ್ಷಣಿಕ (ಕ್ಷರ)
ಚಿತ್ತ-ಯೋಗದ ಪರಿಭಾಷೆ. ಆತ್ಮನಿಲ್ಲದೆ ದೇಹವುಂಟೇ !
ಮೂರು ಗುಣಗಳ ಸಾಮರಸ್ಯದೊಂದಿಗೆ ಆತ್ಮ ಬೆಳಗಲೂ ಸಾಧ್ಯ;
ಆತ್ಮಶಾಶ್ವತ ; ದೇಹ ಜೀವಿತಾವಧಿಯದು. ಇವುಗಳ ಸಂಬಂಧ
ತಾತ್ತ್ವಿಕ ಮೂಲದ್ದು.

## ಆಧಾರ ಗ್ರಂಥಗಳು


೧. ಆರ್ಯ ಆಚಾರ್ಯ, **ಷಡ್ದರ್ಶನ ಸಮುಚ್ಚಯ**, ಧಾರವಾಡ, ಮನೋಹರ ಗ್ರಂಥಮಾಲಾ, ೨೦೧೩.

೨. ಗಣಪತಿ ಶಾಸ್ತ್ರೀ ಎಂ.ಎಂ. **ವಿಷ್ಣುಸಂಹಿತಾ**, ಡೆಲ್ಲಿ, ನಾಗ್ ಪಬ್ಲಿಷರ್ಸ್, ೧೯೯೧.

೩. ಗೋಮಠಂ ಶ್ರೀನಿವಾಸ ಜ್ಯೋತಿಷಿ, **ಶ್ರೀಪಾದ್ಮಸಂಹಿತಾ**, ಮೈಸೂರು, ಕಾರೋನೇಷನ್ ಮುದ್ರಣಾಲಯ, ೧೯೭೯.

೪. ಮೂರ್ತಿ ಬಿ.ಆರ್.ವಿ. 'ದಾರ್ಶನಿಕ ಪಂಥಗಳ ಉದಯ' **ಯುಗಯಾತ್ರೀ ಭಾರತೀಯ ಸಂಸ್ಕೃತಿ**, ಮೈಸೂರು, ಸಂ. ೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೫.

೫. ರಂಗಸ್ವಾಮೀ, ಹೆಚ್.ಎನ್. ಮತ್ತು ಇತರರು, **ಶ್ರೀಮನ್ಮಹಾಭಾರತ**, (ಸಂಪುಟಗಳು), ಬೆಂಗಳೂರು, ಭಾರತ ದರ್ಶನ, ಪ್ರಕಾಶನ. ಸಂ. ೨೪/೧೯೮೨, ಸಂ. ೨೫/೧೯೮೨, ಸಂ. ೨೬/೧೯೯೦, ಸಂ. ೩೦/೧೯೮೫, ಸಂ. ೩೨/೧೯೫೮.

೬ ರಂಗಸ್ವಾಮೀ ಹೆಚ್.ಎನ್. ಮತ್ತು ಇತರರು, **ಶ್ರೀಮದ್ಭಾಗವತ**, ಸಂ. ೨, ಬೆಂಗಳೂರು, ಭಾರತ ದರ್ಶನ ಪ್ರಕಾಶನ, ೨೦೦೦.

೭. ವಿದ್ವಾನ್ ನಾಗೇಶಶಾಸ್ತ್ರಿ, 'ಷಡ್ದರ್ಶನಗಳು' –**ಭಾರತೀಯ ಸಂಸ್ಕೃತಿ ದರ್ಶನ**, ಬೆಂಗಳೂರು, ಸಾಗರ್ ಪ್ರಕಾಶನ, ೨೦೦೯.

೮. ವೀರಸಿಂಘೆ ಎಸ್.ಜಿ.ಎಂ., **ದಿ ಸಾಂಖ್ಯಾ ಫಿಲಾಸೊಫಿ**, ಡೆಲ್ಲಿ, ಶ್ರೀ ಸತ್ಗುರು ಪಬ್ಲಿಕೇಷನ್ಸ್, ೧೯೯೩.

೯. ಶ್ರೀಹರಿ ಮತ್ತು ಶ್ರೀನಿವಾಸರಾಯ ನೆ.ವೆಂ., **ಶ್ರೀಮದ್ಭಾಗವತ**, ಸಂ. ೯, ಬೆಂಗಳೂರು ಭಾರತ ದರ್ಶನ ಪ್ರಕಾಶನ, ೨೦೦೬.

೧೦. ಸತ್ಕಾರೀ ಶರ್ಮ, **ಸಾಂಖ್ಯಕಾರಿಕಾ**, ವಾರಾಣಸಿ, ಚೌಕಾಂಬಾ ಸಂಸ್ಕೃತ ಸೀರಿಸ್, ೧೯೯೪.

೧೧. ಸ್ವಾಮಿ ಆದಿದೇವಾನಂದ, **ಶ್ವೇತಾಶ್ವತರೋಪನಿಷತ್**, ಮೈಸೂರು, ಶ್ರೀರಾಮಕೃಷ್ಣಾಶ್ರಮ, ೨೦೦೩.

೧೨. ಹಿರಿಯಣ್ಣ ಎಂ., **ಭಾರತೀಯ ತತ್ತ್ವ ಶಾಸ್ತ್ರದ ರೂಪುರೇಖೆಗಳು**, ಬೆಂಗಳೂರು, ಅಭಿನವ, ೨೦೦೪.


■

# ಹವ್ಯಕ ಗೂಢಲಿಪಿ ತಿಗಳಾರಿ ಹಸ್ತಪ್ರತಿ ಗ್ರಂಥಗಳು



ಡಾ. ಕೆಳದಿ ಗುಂಡಾಜೋಯಿಸ್

ವೇದ ಕಾಲದಿಂದಲೂ ನಮ್ಮ ಪುರಾತನ ಮಹರ್ಷಿಗಳು ಲೋಕೋದ್ಧಾರಕ್ಕಾಗಿ ಜ್ಞಾನ ಭಂಡಾರಗಳನ್ನು ಬಿಟ್ಟುಹೋಗಿದ್ದಾರೆ. ನಿಸ್ಸಂದೇಹವಾಗಿ ನಾವು ಅವರಿಗೆ ಋಣಿಗಳಾಗಬೇಕಾಗಿದೆ. ವೇದ, ಆಗಮ, ಆಯುರ್ವೇದ, ಅರ್ಥಶಾಸ್ತ್ರ, ಶಿಲ್ಪಶಾಸ್ತ್ರ, ಸಂಗೀತ, ಜ್ಯೋತಿಷ, ವಾಸ್ತುಶಾಸ್ತ್ರ, ಶರೀರ ಶಾಸ್ತ್ರ ಮುಂತಾದವುಗಳನ್ನು ಮುಂದಿನ ಪೀಳಿಗೆಗೆ ಉಳಿಸಲು ಹಸ್ತಪ್ರತಿಗಳನ್ನು ನೀಡಿದ್ದಾರೆ. ಗೌತಮ ಬುದ್ಧನ ಕಾಲದ ಲಲಿತ ವಿಸ್ತರದಲ್ಲಿ ಉಲ್ಲೇಖಿಸಿದಂತೆ ೬೪ ಲಿಪಿಗಳಲ್ಲಿ ಹಸ್ತಪ್ರತಿ ರಚನೆಯಾದ ಮಾಹಿತಿಗಳನ್ನೊಳಗೊಂಡಿದೆ. ಇವುಗಳಲ್ಲಿ ಸೇವನಾಗರಿ, ನಂದಿನಾಗರಿ, ತಮಿಳು, ತೆಲುಗು, ಶಾರದಾಲಿಪಿ (ಉತ್ತರ ಭಾರತ), ಮಲೆಯಾಳಿ, ಕನ್ನಡ, ತಿಗಳಾರಿ ಲಿಪಿಗಳಲ್ಲಿರುವ ಪ್ರಾಚೀನ ಹಸ್ತಪ್ರತಿಗಳು ದಕ್ಷಿಣ ಭಾರತದಲ್ಲಿ ವಿಪುಲವಾಗಿ ಉಪಲಬ್ಧವಿದೆ. ಇಂತಹ ಸಾಹಿತ್ಯ ಭಂಡಾರಗಳು ಮೂಲೆಗುಂಪಾಗುತ್ತಿರುವುದು ಅತ್ಯಂತ ಖೇದನೀಯವಾದುದು. ಇಂದಿನ ದಿನಗಳಲ್ಲಿ ಇವುಗಳು ಅಪ್ರಸ್ತುತವೆಂಬ ವಾದವೊಂದು ವಿಜ್ಞಾನಿಗಳೆನಿಸಿಕೊಂಡವರ ಅನಿಸಿಕೆ. ಹಸ್ತಪ್ರತಿಗಳಲ್ಲಿರುವ ಜ್ಞಾನಭಂಡಾರಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಕೈಗೊಂಡಲ್ಲಿ ಹಿಂದಿಗಿಂತ ಇಂದು ಹೆಚ್ಚು ಪ್ರಸ್ತುತವಾಗಿರುವುದನ್ನು ಕಂಡುಕೊಳ್ಳಬಹುದು. ಅರ್ಥ ಕಾಮಗಳನ್ನು ಧರ್ಮದ ಚೌಕಟ್ಟಿನಲ್ಲಿ ಸಾಧಿಸಬೇಕೆಂದೂ, ಸುದೀರ್ಘ ಕಾಲ ಕಾಡುವ ರೋಗಗಳಿಗೆ ಅಧ್ಯಾತ್ಮವನ್ನೊಳಗೊಂಡ ಆಯುರ್ವೇದವು ಪರಿಣಾಮಕಾರಿ ಚಿಕಿತ್ಸೆಯೆಂಬುದನ್ನೂ ಈಗಿನ ಪ್ರಾಮಾಣಿಕ ವಿಜ್ಞಾನಿಗಳು ಕಂಡುಕೊಂಡಿದ್ದಾರೆ. ವೇದಾದಿ ಸಂಸ್ಕೃತ ಸಾಹಿತ್ಯಗಳನ್ನೊಳಗೊಂಡ ಪುರಾತನ ಹಸ್ತಪ್ರತಿಗಳನ್ನು ಸಂರಕ್ಷಿಸಿ ಅದರಲ್ಲಿರುವ ಜ್ಞಾನಭಂಡಾರಗಳನ್ನೂ ವೈಜ್ಞಾನಿಕವಾಗಿ ಸದುಪಯೋಗಪಡಿಸಿಕೊಳ್ಳುವ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಪಾಶ್ಚಾತ್ಯ ವಿದ್ವಾಂಸರೂ ಪ್ರಾಚೀನ ಹಸ್ತಪ್ರತಿಗಳ ಮಹತ್ವವನ್ನು ಮನಗಂಡು ಇವುಗಳನ್ನು ವಿದೇಶಗಳಿಗೆ ಕೊಂಡೊಯ್ದು ರಕ್ಷಿಸಿ ಅಧ್ಯಯನ

ಕೈಗೊಂಡಿರುವುದನ್ನೂ ಕಾಣಬಹುದು. ಕರ್ನಲ್ ಮೆಕಂಝಿ, ಫ್ಲೀಟ್, ಬರ್ನಲ್, ರೆವರೆಂಡ್ ಕಿಟ್ಟೆಲ್ ಮುಂತಾದವರು ಈ ಕುರಿತು ಕೃತಿ ರಚನೆ ಮಾಡಿದ್ದಾರೆ. ಕನ್ನಡ ಮೋಡೀ ಲಿಪಿ ಕಡತದ ಹಸ್ತುಪ್ರತಿಗಳನ್ನು ಅಧ್ಯಯನ ಮಾಡಿ ಶೃಂಗೇರಿ ಮಠದಲ್ಲಿರುವ ಚಾರಿತ್ರಿಕ ದಾಖಲೆಗಳ ಕ್ಯಾಟಲಾಗ್ ಸಿದ್ಧಪಡಿಸಿದ ವಿದ್ವನ್ಮಣಿ ಡಾ. ಎ.ಕೆ. ಶಾಸ್ತ್ರಿಗಳು "ಕಡತದ ಶಾಸ್ತ್ರಿ" ಎಂದೇ ಖ್ಯಾತನಾಮರಾಗಿದ್ದಾರೆ.

ಪ್ರಕೃತ ನನ್ನ ಈವರೆಗಿನ ಹಸ್ತಪ್ರತಿ ಸಂಶೋಧನೆಯಲ್ಲಿ ಕಂಡುಬರುವ 'ತಿಗಳಾರಿ' ಲಿಪಿ ಹಸ್ತಪ್ರತಿ ಕುರಿತು ವಿದ್ವಾಂಸರ ಅವಗಾಹನೆಗಾಗಿ ಪ್ರಸ್ತುತಪಡಿಸಲಾಗಿದೆ.

**ತಿಗಳಾರಿ ಲಿಪಿ ಹಸ್ತಪ್ರತಿಗಳು**

ಆದ್ಯ ಶಂಕರಾಚಾರ್ಯರ ಜನ್ಮಸ್ಥಾನ ಕಾಲಟಿಯೊಳಗೊಂಡು ಕೇರಳ ಪ್ರಾಂತವು ವೇದಾಗಮ, ಯಜ್ಞಯಾಗಾದಿ ಕರ್ಮ ಸ್ಥಾನಗಳನ್ನೊಳಗೊಂಡು ಪ್ರಮುಖ ಕೇಂದ್ರ ಸ್ಥಾನವಾಗಿರುವುದಾಗಿ ವಿದ್ವಾಂಸರ ಅಭಿಪ್ರಾಯವಾಗಿದೆ. ಇಲ್ಲಿಂದಲೇ ಹವ್ಯಕವ್ಯ ಕರ್ಮಾದಿಗಳನ್ನು ಹಾಗೂ ವೇದದ ಜ್ಞಾನಭಂಡಾರಗಳನ್ನು ಹಸ್ತಪ್ರತಿ ರೂಪಗಳಲ್ಲಿ ಬಳುವಳಿಯಾಗುತ್ತಿರುವವರೇ ಅಹಿಚ್ಚತ್ರ ಮಹಾಬ್ರಾಹ್ಮಣರೆಂದು ಮಹರ್ಷಿ ದೇವರಾತರು ಉದ್ಗರಿಸಿದ್ದಾರೆ. ಅವುಗಳೇ 'ತಿಗಳಾರಿ' ಲಿಪಿಗಳಲ್ಲಿ ರೂಪುಗೊಂಡ ಗೂಢಲಿಪಿ ಹಸ್ತಪ್ರತಿಗಳೆಂದು ಶಿರ್ಸಿಯ ಸ್ವರ್ಣವಲ್ಲಿ ಮಠದಲ್ಲಿ ಜರುಗಿದ ಕರ್ನಾಟಕ ಇತಿಹಾಸ ಅಕಾದೆಮಿ ಸಭೆಯಲ್ಲಿ ಖ್ಯಾತ ವಿದ್ವಾಂಸರಾದ ದಿ. ಪ್ರೊ. ಜಿ.ಎಸ್. ದೀಕ್ಷಿತರು ಅಧ್ಯಕ್ಷ ಭಾಷಣದಲ್ಲಿ ವಿಶದೀಕರಿಸಿದ್ದಾರೆ. ತಿಗಳಾರಿ ಲಿಪಿಯಲ್ಲಿರುವ ಹಸ್ತಪ್ರತಿಗಳು ಉತ್ತರ ಕನ್ನಡ ಆದಿಯಾಗಿ ಪಶ್ಚಿಮ ಘಟ್ಟದ ಮೂಲೆ ಮೂಲೆ ಹಳ್ಳಿಗಳಲ್ಲಿ ವಿಪುಲವಾಗಿ ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರದ ಸರ್ವೇಕ್ಷಣೆಯಲ್ಲಿ ಕಂಡುಬಂದಿವೆ.

**ತಿಗಳಾರಿ ಲಿಪಿ ಉಗಮ ವಿಕಾಸ**

ಲ್ಯೂಯಿ ರೈಸ್‌ರವರ ಎಪಿಗ್ರಾಫಿಯಾ ಕರ್ನಾಟಕ ಸಂಪುಟ III ತಿ.ನ. ೨೭ ಹಾಗೂ ಈಗಿನ ಮೈಸೂರು ವಿಶ್ವವಿದ್ಯಾನಿಲಯದ ಮೈಸೂರು ಶಾಸನ ಸಂಖ್ಯೆ ೨೩೮ರ ಮೇರೆಗೆ ತಡಿಮಾಲಿಂಗಿ ಮಹಾಲಿಂಗೇಶ್ವರ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವ ಶಿಲಾಶಾಸನದಲ್ಲಿ ೩೨ರಿಂದ ೩೭ನೇ ಸಾಲಿನವರೆಗೆ.

**ಪಠ್ಯಭಾಗ**

ಸಾಲು ೩೨ .... ಪ್ರತ್ತಜಿಮನೆ ಎರಡನೂ ಇನ್ತಿರಹ
ಕ್ಷೇತ್ರಂಗಳನೂ ಆಮಾಇಲಿಂಗೆಯಲು

.... ೩೩ .... ರುಗ್ವೇದವನೋದಿಸುವ (ಖ)ಂಡಿಕದ ಉಪಾದ್ಯರ ಜೀವಿತಕ್ಕೆ ವರ್ಷ
ಗಕ್ಕೆ ಗ

.... ३४ .... ದ್ಯಾಣಂ ಆಱು । ನಾಗರ ಕಂನಡ ತಿಗುಳಾರ್ಯವನೋದಿಸುವ ಬಾಲಶೀಕ್ಷೆ

.... ३੫ .... ಉಪಾದ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗದ್ಯಾಣಂ ಆಱು । ಇಂತೀ ಧರ್ಮವಂ

.... ३६ .... ಗಳಿಗೆ ಸಲುವಂತಾಗಿ ಆ ಪೆರುಮಾಳೆ ದೇವರನಾಯಕರು ಧಾರಾ

.... ३೭ ... ಪೂರ್ವಕಂ ಮಾಡಿಕೊಟ್ಟರು ॥

Note : The Tadrinalingi record (TN 238) of 1290 of Perumala Dannayaka mentioned as the son of Vishnudeva as Manchale (not to be identified as the one from Hemmaragala) speaks of his donation for running of primary school where Nagari, Kannada, Tamil and Tigalarya were to be taught. ಶಾಸನದ ಕಾಲ ೧೪-೧೧-೧೨೯೦.

ಶಿವಮೊಗ್ಗ ಜಿಲ್ಲಾ ಸಾಗರ ತಾಲ್ಲೂಕಿನಲ್ಲಿ 'ಖಂಡಿಕಾ' ಮತ್ತು ಮಂಚಾಲೆ ಗ್ರಾಮವಿದೆ. ಇತಿಹಾಸ ಪ್ರಸಿದ್ಧ ಕೆಳದಿ ಶ್ರೀರಾಮೇಶ್ವರ ದೇವಸ್ಥಾನದಲ್ಲಿ ಸ್ವಾತಂತ್ರ್ಯಪೂರ್ವದ ಬ್ರಿಟಿಷರ ಆಡಳಿತದಲ್ಲಿ ದೇವಾಲಯದ ಅರ್ಚಕರನ್ನು ತರಬೇತುಗೊಳಿಸುವ ವೇದಪಾಠಶಾಲೆಯು ಮುಜರಾಯಿ ಇಲಾಖೆಯಿಂದ ನಡೆಯುತ್ತಿದ್ದು ಇಲ್ಲಿಯೂ ತಿಗಳಾರಿ ಲಿಪಿ ಗ್ರಂಥಗಳ ಅಧ್ಯಯನ ವೇದ ವಿದ್ವಾಂಸರಾಗಿದ್ದ ದಿ. ಶ್ರೀನಿವಾಸಭಟ್ಟರು ನಿರ್ವಹಿಸಿದ್ದು ಇತಿಹಾಸ, ಪ್ರಸಿದ್ಧ ವಿದ್ವಾಂಸ ಮಹಾಮಹೋಪಾಧ್ಯಾಯ ನಡೆಹಳ್ಳಿ ಶ್ರೀ ರಂಗನಾಥ ಶರ್ಮರೂ ಇಲ್ಲಿಯೇ ವಿದ್ಯಾರ್ಥಿಯಾಗಿದ್ದು ಈಗಲೂ ನೆನಸಿಕೊಳ್ಳುತ್ತಾರೆ.

Reverend F. Kittel ನಿಘಂಟಿನಲ್ಲಿ ಉಪಾದ್ಯರಿಗೆ ಉಪಾಧ್ಯಾಯರು, ಪುರೋಹಿತರು ಎಂದು ಅರ್ಥೈಸಲಾಗಿದೆ. ಅದೇ ಕೃತಿಯಲ್ಲಿ-

Tigalari > Tigaladi k.n. The characters in use among Brahmins in kanara district for the samskrit language. characters own their origin to Tigalari. ಆರ್ಯ > a respectable, venerable man an Arya; 2, A man of good family, an elder ಎಂಬುದಾಗಿ ಉಲ್ಲೇಖಗೊಂಡಿದೆ.

ನಾಗರಿ, ಕನ್ನಡ, ತಮಿಳು ಹಾಗೂ ತಿಗಳಾರಿ ಲಿಪಿಗಳಲ್ಲಿರುವ ಹಸ್ತಪ್ರತಿ ಗ್ರಂಥಗಳನ್ನು ಗುರುಕುಲ ಮಾದರಿಯಲ್ಲಿ ಪ್ರಾಥಮಿಕವಾಗಿ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಿದ್ದ ಸಂಗತಿ ಗಮನಾರ್ಹವಾದುದು. ಇಟಲಿ ಪ್ರವಾಸಿ ೧೬೨೩ರಲ್ಲಿ ತಾನೂ ಇಂತಹ ಶಾಲೆಯನ್ನು ಡೆಲ್ಲವಲ್ಲೆಯು ಕಣ್ಣಾರೆ ನೋಡಿದ್ದುದನ್ನು ಉಲ್ಲೇಖಿಸಿದ್ದಾನೆ.

**ತಿಗಳಾರಿ ತುಳು ಲಿಪಿ ವಿವಾದಗಳು**

ಭಾಷಾವಾರು ಪ್ರಾಂತಗಳಂತೆ ತುಳು ತಿಗಳಾರಿ ಲಿಪಿಗಳಲ್ಲಿ ವಿವಾದಗಳು ಹುಟ್ಟಿಕೊಂಡಿವೆ. ಇದು ಪೂರ್ವಾಗ್ರಹ ಪೀಡಿತತೆಯಿಂದ ಉಂಟಾಗಿದೆಯೆಂದೇ ಹೇಳಬಹುದು. ಪ್ರಾಮಾಣಿಕ ವಿದ್ವಾಂಸರು–

ಮಲೆಯಾಳಿಯಲ್ಲಿ – ಲಿಪಿ > ಭಾಷೆ ಎರಡೂ ಇದೆ.

ತುಳು ಲಿಪಿ ಇಲ್ಲ > ಭಾಷೆ ಮಾತ್ರ ಇದೆ.

ತಿಗಳಾರಿ ಲಿಪಿ > ಸಂಸ್ಕೃತ ಭಾಷೆ

ಈ ರೀತಿ ವಿಶ್ಲೇಷಿಸಿದ್ದಾರೆ. ರೆವರೆಂಡ್ ಕಿಟ್ಟಲ್ ನುಡಿದಂತೆ ಸಂಸ್ಕೃತ ಸಾಹಿತ್ಯಗಳೆಲ್ಲವೂ ತಿಗಳಾರಿ ಲಿಪಿಯಲ್ಲಿವೆ. ಬರ್ನಲ್ ಹೇಳಿದ ತುಳು ಲಿಪಿಯು ತಿಗಳಾರಿ ಲಿಪಿಯೇ ಹೊರತು ತುಳು ಲಿಪಿಯಲ್ಲವೆಂಬುದನ್ನು ಕಂಡುಕೊಳ್ಳಬಹುದು. ಇದನ್ನೇ ಪ್ರಸಿದ್ಧ ವಿದ್ವಾಂಸರಾದ ದಿ. ಡಾ. ಗುರುರಾಜಭಟ್ಟರು 'So called Tulu script' ಎಂದು ಉಲ್ಲೇಖಿಸಿದ್ದಾರೆ. (ಅನುಬಂಧ ನಂ I) ಮಂಗಳೂರಿನ ಶ್ರೀ ಮೋಹನ್ ಬೋಳಾರ್‌ರವರು ಪರಿಷ್ಕರಿಸಿದ ತುಳು ಲಿಪಿಯನ್ನು ಪ್ರಕಟಿಸಿದ್ದಾರೆ. (ಅನುಬಂಧ ನಂ. II) ಮೈಸೂರು ಪ್ರಾಚ್ಯ ಸಂಶೋಧನಾ ಇಲಾಖೆಯ ಲಿಪಿತಜ್ಞ ಡಾ. ಜಗನ್ನಾಥ್‌ರವರು Manuscriptology : An entrance ಕೃತಿಯಲ್ಲಿ ಹೀಗೆ ಹೇಳಿದ್ದಾರೆ :

Tigalari letter patterns show different shapes. It was prevailed in South Karnataka. Sometimes it was called Balabandhi, the reason for the same is not clear, Most of the works are availabele in it are of either Sanskrita or Kannada. Recently tulu works in very small number are formd in this script. So the name 'Tulu' script, as applied to it by some is a misnomer. The word tulu is for language and tiglari script apart from Nandi nagari, it is Tigalari in which Madhva works are avalable aplently. Now it is no longer in use. Since it is very importane script particularly in Kasaragodu area one shall not neglect it. Most of tiglari mss have numbering system of Kannada in folios. The handwriting in mss of this script is generaly very legilble.

(Manuscriptology : An entrance by Dr. Jagannath, ORI, Mysore) pp. 28-29.

ಮೈಸೂರು ವಿಶ್ವವಿದ್ಯಾನಿಲಯವೂ ವಿಶ್ವಕೋಶದ ಇತಿಹಾಸ ಸಂಪುಟದಲ್ಲಿ ತಿಗಳಾರಿ ಲಿಪಿ ಪರಿಚಯವನ್ನೂ ನೀಡಿದೆ.

ತಿಗಳಾರಿ ಲಿಪಿ ಹಸ್ತಪ್ರತಿಗಳು (ಮಾದರಿ)

೧. ಬೋಧಾಯನ ಶ್ರೌತ ಸೂತ್ರ.

೨. ವಿಶ್ವಾಮಿತ್ರ ಕಾರಿಕಾ.

೩. ಪರ್ಜನ್ಯ ವಿಧಿ.

೪. ರಂಭಾವಿವಾಹ.

೫. ಯಜುರ್ವೇದ ಆರಣ್ಯಕ.

೬. ಸ್ವಚ್ಛಂದ ಪದ್ಧತಿ.

೭. ಸ್ವರೂಪ ಪ್ರಕಾಶಿಕೆ.

೮. ಯಜುರ್ವೇದ ಸಂಹಿತೆ.

೯. ಋಗ್ವೇದ ಪ್ರಾತಿಶಾಖ್ಯಮ್.

೧೦. ಆಚಾರಕಮಲಾಕರ.

೧೧. ಸನ್ಯಾಸಿ ವಿಧಿ.

೧೨. ಆರಣ ಪನ್ನ.

೧೩. ಸುಭಾಷಿತ ಸಂಗ್ರಹ.

೧೪. ಸೂರ್ಯಸಿದ್ಧಾಂತ ವ್ಯಾಖ್ಯಾ.

೧೫. ಬೋಧಾಯನ ಪ್ರಯೋಗ.

೧೬. ಸರ್ಪಶಾಪ ಸಂಸ್ಕಾರ

೧೭. ಬ್ರಹ್ಮಶಾಪ ವಿಮೋಚನ ವಿಧಿ.

೧೮. ಆಯರ್ವೇದ.

೧೯. ಪರಮಹಂಸೋಪನಿಷತ್.

೨೦. ಅಮೃತಬಿಂದೂ ನಾದೋಪನಿಷತ್.

೨೧. ಉತ್ತರಗೀತಾ ವ್ಯಾಖ್ಯಾ (ಗೌಡಪಾದಾಚಾರ್ಯ)

೨೨. ಮೂಕಾಂಬಾ ಸ್ತೋತ್ರಮ್

೨೩. ಯಾಜ್ಞವಲ್ಕ್ಯಸ್ಮೃತಿ

೨೪. ಬ್ರಹ್ಮಾಸ್ತ್ರ ಮಂತ್ರ ವಿಧಿ

೨೫. ಸರ್ವರೋಗ ಹರಶಾಂತಿ

೨೬. ಪಾಂಡವ ಗೀತಾ

೨೭. ಪರಬ್ರಹ್ಮ ಪ್ರಕಾಶಿಕೆ

೨೮. ಅಥರ್ವಣವಿಧಿಃ

೨೯. ಧಾತ್ರೀ ಹೋಮ

೩೦. ಗೋತ್ರಪ್ರವರ ನಿರ್ಣಯಃ

೩೧. ಯುಗಾದಯಃ

೩೨. ಗರುಡ ಪುರಾಣಮ್

೩೩. ಬಿನ್ನಾಹ ಪದ್ಧತಿ (ವಿದ್ವಾನ್ ಶ್ರೀ ಹುಲಿಮನೆ ಗಣಪತಿರವರ ಸಂಗ್ರಹ)

೩೪. ವಿದ್ಯಾಮಾಧವೀಯ ವ್ಯಾಖ್ಯಾನ

Lewis Rice ರವರ Catalogue 1884.

೩೫. ಕರ್ಮವಿಪಾಕ–

ಇದರ ನಾಗರೀಲಿಪಿ ಹಸ್ತಪ್ರತಿಯು ನಂ. 526, Sir Raja Radhkanta Deva Bahadur, Calcutta. ನಂ. 635, Raja Satishchandra Raya Krishna Nagar, N.I. ದಲ್ಲಿದೆ.

**ತಿಗುಳಾರ್ಯವನೋದಿಸುವ ಬಾಲ ಶಿಕ್ಷಾ ಶಾಲೆ**

ಉತ್ತರ ಭಾರತದಲ್ಲಿ ನಳಂದ ತಕ್ಷಶಿಲೆಯಂತೆ ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ತಾಳಗುಂದದಲ್ಲಿ ವಿಶ್ವವಿದ್ಯಾಲಯ ರೂಪದ ಗುರುಕುಲವಿದ್ದ ಅವಶೇಷಗಳಿವೆ. ಕೆಳದಿ ಇತಿಹಾಸದಲ್ಲಿರುವ ಅಗ್ರಹಾರ ಮತ್ತು ದೇವಾಲಯಗಳಲ್ಲಿ ಕ್ರಮವಾದ ಗುರುಕುಲ ವಿದ್ಯಾಭ್ಯಾಸಗಳನ್ನು ಕ್ರಿ.ಶ. ೧೬೨೩ರಲ್ಲಿ ಕಣ್ಣಾರೆ ಕಂಡ ಇಟಲಿ ಪ್ರವಾಸಿ ಪಿಯತ್ರೋಡೆಲ್ಲ ವಲ್ಲೆಯು ಪ್ರವಾಸಿ ಕಥನದಲ್ಲಿ ದಾಖಲಿಸಿದ್ದಾನೆ. ವಿದೇಶೀಯ ಪ್ರವಾಸಿ ಜಾನ್ ಫ್ರಾಯರನು ಗೋಕರ್ಣ ದೇವಾಲಯ ಹಾಗೂ ಪ್ರಾಚೀನ ಹಸ್ತಪ್ರತಿ ಭಂಡಾರವನ್ನು ಕುರಿತು–

"It is an University of the Brahmins and well endowed....This though a principal university, can boast of no Bodlean or Vatican ; Their libraries being old manuscripts of their own cabalas or mysteries understood only by the brahmins, they live not, under a collagiate confinement, but in pretty neat houses."

ಆ ಕಾಲದ ಸಾಂಸ್ಕೃತಿಕ ಜ್ಞಾನ ಭಂಡಾರಗಳು ಹಾಗೂ ಸಾಮಾಜಿಕ ಸ್ಥಿತಿಗಳನ್ನೂ ಹೀಗೆ ವರ್ಣಿಸಿದ್ದಾನೆ.

**ಅನ್ವೇಷಣೆಯಲ್ಲಿ ತಿಗಳಾರಿ ಹಸ್ತಪ್ರತಿಗಳು (ಮಾದರಿ)**

ಭಾರತ ಸರಕಾರದ ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರದಿಂದ ಕೈಗೊಂಡ ಸರ್ವೇಕ್ಷಣೆಯಲ್ಲಿ ತಿಗಳಾರಿ ಲಿಪಿ ಹಸ್ತಪ್ರತಿಗಳು ವಿಪುಲವಾಗಿ ಗೋಚರಿಸಿವೆ. ಅವುಗಳ ಸಂರಕ್ಷಣೆಗಾಗಿ ಅಪಾರವಾಗಿ ಶ್ರಮಿಸುತ್ತಿದೆ. ಮಾದರಿಗಾಗಿ ತಿಗಳಾರಿ ಹಸ್ತಪ್ರತಿ ಕಟ್ಟಿನಲ್ಲಿ ಕಂಡುಬಂದ ಕೃತಿಗಳನ್ನು ಈ ಕೆಳಗೆ ನೀಡಲಾಗಿದೆ.

| | | |
|---|---|---|
| ಓಲೆ ಕಟ್ಟು I | ೧. ರಘುವಂಶ | ೬೦ ಪುಟಗಳ ಪತ್ರಗಳು |
| | ೨. ಕುಮಾರ ಸಂಭವ | ೪ – " – |
| ಕಟ್ಟು II | ೩. ವಾಸ್ತುಶಾಸ್ತ್ರ | ೨ – " – |
| | ೪. ವೃಕ್ಷನಾಮಾನಿ | ೩ – " – |
| | ೫. ಭೂಮಿ ಪರೀಕ್ಷಾ | ೩ – " – |
| | ೬. ಸಮಚತುರಸ್ರ ಭೂಮಿ ವಿಶೇಷಃ | ೧ – " – |
| | ೭. ಗೃಹಲಕ್ಷಣಮ್ | ೧ – " – |
| | ೮. ಕೂಪ ಲಕ್ಷಣಮ್ | ೧ – " – |
| | ೯. ಭೂಮಿಶೋಧನಮ್ | ೧ – " – |
| | ೧೦. ವಾಸ್ತುಪುರುಷ ಲಕ್ಷಣಮ್ | ೨ – " – |
| | ೧೧. x x ಬಿಂಬ ಲಕ್ಷಣಮ್ | ೨ – " – |
| | ೧೨. ನಕ್ಷತ್ರ ಲಕ್ಷಣಮ್ | ೧ – " – |
| | ೧೩. ಸ್ತಂಭ ಸ್ಥಾಪನ ಲಕ್ಷಣಮ್ | ೧ – " – |
| | ೧೪. ಅಂಗುಲ ಪ್ರಮಾಣಃ | ೨ – " – |
| | ೧೫. ಅಸ್ಥಿಶೋಧಃ | ೩ – " – |
| | ೧೬. ಆಯುಷ್ಯ ವಿಚಾರಃ | ೧ – " – |
| | ೧೭. ಕೂಟ ವಿಚಾರಃ | ೧ – " – |
| | ೧೮. ಆಯ ಲಕ್ಷಣಮ್ | ೧ – " – |
| | ೧೯. ಆಯಗಣನ ಕ್ರಮಃ | ೧ – " – |
| | ೨೦. ವಾಸ್ತುಪುರುಷ ಲಕ್ಷಣಮ್ | ೧ – " – ಇದು ಬೇರೆ ಬಿಡಿ ಓಲೆ |

೨೧. ವಾಸ್ತುಪುರುಷ ಪ್ರಾರ್ಥನಮ್ ೧ - " -
೨೨. ಸ್ಥಿರ ವಾಸ್ತುಃ ೨ - " -
೨೩. ಭಿತ್ತಿಶಾಸ್ತ್ರ ಪ್ರಮಾಣಃ ೩ - " -
೨೪. ದ್ವಾರ ಲಕ್ಷಣಮ್ ೪ - " -
೨೫. ಗೃಹ ಆಯುಷ್ಯ ಪ್ರಮಾಣಃ ೧ - " -
೨೬. ನಿಂಬುವ ಲಕ್ಷಣಂ ೨ - " -

ಈ ರೀತಿ ಪ್ರತಿ ಓಲೆಕಟ್ಟಿನಲ್ಲಿಯೂ ಹಸ್ತಪ್ರತಿ ಅಧ್ಯಯನ ನಡೆಸಿದಲ್ಲಿ ವಿನೂತನ ಅಂಶಗಳನ್ನೊಳಗೊಂಡ ನಮ್ಮ ಪೂರ್ವಿಕರ ಜ್ಞಾನಭಂಡಾರಗಳು ಆ ಸಂಶೋಧನೆಗೆ ರೋಚಕ ಸಂಗತಿಗಳನ್ನು ನೀಡುತ್ತವೆ.

**ಉಪಸಂಹಾರ**

ಕಾಲ ಕಳೆದಂತೆಲ್ಲ ಪ್ರಾಚೀನ ಹಸ್ತಪ್ರತಿಗಳ ಜ್ಞಾನ ಭಂಡಾರದ ಅಧ್ಯಯನ ಕ್ಷೀಣಿಸುತ್ತಿದೆ. ಇದಕ್ಕೆ ತಿಗಳಾರಿ ಹಸ್ತಪ್ರತಿಯೂ ಹೊರತಾಗಿಲ್ಲ. ಮುಂದಿನ ಪೀಳಿಗೆಗೆ ಇವುಗಳ ರಕ್ಷಣೆ ಒತ್ತಿ ಹೇಳಬೇಕಾಗಿಲ್ಲವಷ್ಟೆ? ಕರ್ನಾಟಕ ವಿಶ್ವವಿದ್ಯಾಲಯದ ದಿ. ಡಾ. ರಘುನಾಥ ಭಟ್ಟರು ವಿಶ್ವವಿದ್ಯಾನಿಲಯದಲ್ಲಿ ಜರುಗಿದ Palaeographic art of India and South East Asia ವಿದ್ವತ್ ಸಭೆಯಲ್ಲಿ ಪ್ರಬಂಧ ಸಾದರಪಡಿಸಲು ನನಗೆ ಆಹ್ವಾನಿಸಿದ್ದರು. ತಿಗಳಾರಿ ಹಸ್ತಪ್ರತಿ ಲಿಪಿ ತಜ್ಞರಾಗಿದ್ದ ವಿದ್ವನ್ಮಣಿ ದಿ. ರಾಮಚಂದ್ರ ಶಾಸ್ತ್ರಿ ಸೂರಿರವರು ಇದಕ್ಕಾಗಿ ಸಂಸ್ಥೆ ಹುಟ್ಟು ಹಾಕಿ ಇದೇ ಲಿಪಿಯಲ್ಲಿಯೇ ಕ್ಯಾಟಲಾಗ್ ಸಿದ್ಧಪಡಿಸಿದ್ದುದಲ್ಲದೆ 'ಕರ್ಮವಿಪಾಕ'ವೆಂಬ ಸಮಗ್ರ ಕೃತಿಯನ್ನೇ ಲಿಪಿ ಮಾಡಿ ಪ್ರಕಟಿಸಿರುವುದು ಗಮನಾರ್ಹವಾದುದು. ಹಿಂದೆಯೇ ಪ್ರಸ್ತಾಪಿಸಿದಂತೆ ನವದೆಹಲಿ ರಾಷ್ಟ್ರೀಯ ಸಂಸ್ಕೃತ ಸಂಸ್ಥಾನದ ಕ್ಯಾಟಲಾಗ್‌ನಲ್ಲಿರುವ ಕರ್ಮವಿಪಾಕ ಗ್ರಂಥವು ನಾಗರೀ ಲಿಪಿಯಲ್ಲಿರುವುದು ಅವಲೋಕನಾರ್ಹವಾದುದು. ತಿಗಳಾರಿ ಲಿಪಿಯನ್ನೇ ತುಳುಲಿಪಿಯೆಂದು ಕಣ್ತಪ್ಪಿಸಿ, ಐತಿಹಾಸಿಕ ಆಕರಗಳ ಸಾಲಿಗೆ ಸೇರಿದ ತಿಗಳಾರಿ ಲಿಪಿಯನ್ನು ಕಣ್ಮರೆಯಾಗಿಸುತ್ತಿರುವ ಪೂರ್ವಾಗ್ರಹ ಪೀಡಿತ ಬುದ್ಧಿಜೀವಿಗಳ ಸಂಶೋಧನೆ ದುರ್ದೈವವೆಂದೇ ಹೇಳಬೇಕಾಗಿದೆ. ತುಳುಲಿಪಿ ಮಾಲೆಯನ್ನು ಮಂಗಳೂರಿನ ಶ್ರೀ ಮೋಹನ್ ಬೋಳಾರ್‌ರವರು ಪತ್ರಿಕಾ ಗೋಷ್ಠಿಯಲ್ಲಿ ನಿರೂಪಿಸಿರುವುದನ್ನು ಅವಲೋಕಿಸುವುದು ಅಗತ್ಯ. ಬರ್ನಲ್‌ರವರ South Indian Palaeography ಯಲ್ಲಿ ಉಲ್ಲೇಖನಗೊಂಡ ತುಳು ಲಿಪಿಯನ್ನು "The so called tulu Script" ಎಂಬುದಾಗಿ ಖ್ಯಾತ ಸಂಶೋಧಕ ದಿ. ಡಾ. ಗುರುರಾಜ ಭಟ್ಟರು Studies in Tuluva History ಯಲ್ಲಿ ಪ್ರತಿಪಾದಿಸಿದ್ದಾರೆ. ಈ ಕಾರಣಗಳಿಂದ ಕಿಟ್ಟಲ್‌ರವರ ನಿಘಂಟಿನಲ್ಲಿ ಕಂಡಂತೆ ಸಂಸ್ಕೃತ ಭಾಷೆಯನ್ನೊಳಗೊಂಡ ತಿಗಳಾರಿ ಹಸ್ತಪ್ರತಿಗಳು ಬುದ್ಧಿಜೀವಿಗಳಿಂದಲೇ ವಿನಾಶದ ಅಂಚಿನಲ್ಲಿರುವುದನ್ನು ಪ್ರಾಮಾಣಿಕ ವಿದ್ವಾಂಸರು ಪರ್ಯಾಲೋಚಿಸಿ ರಕ್ಷಿಸುವ ಅಗತ್ಯತೆ ಎಂದಿಗಿಂತಲೂ ಇಂದು ಹೆಚ್ಚಾಗಿದೆಯಲ್ಲವೇ?

ನಮ್ಮ ಪೂರ್ವಿಕರು ಕ್ರಿ.ಶ. ೧೪೪೯ರಲ್ಲಿ ವಿಜಯನಗರದಲ್ಲಿ ಆಗಾಗ್ಗೆ ಉಂಟಾದ ಶತ್ರುಗಳ ಉಪಟಳಗಳಿಂದ ತಡೆಯಲಾರದೆ ಆನೆಗೊಂದಿಯಿಂದ ಕೆಳದಿ ಪ್ರಾಂತಕ್ಕೆ ವಲಸೆ ಬಂದವರು. ಆನೆಗೊಂದಿಯಿಂದ ಇಲ್ಲಿಗೆ ಧಾವಿಸಿದ ವೆಂಕಟಾದ್ರಿ ಜೋಯಿಸರು (ಇವರಿಗೆ ವೆಂಕಟಾದ್ರಿ ಯಜಮಾನರೆಂದೂ ಹೆಸರುಂಟು– M.A.R. 1928 ರ ತಾಮ್ರ ಶಾಸನ) ತಮ್ಮೊಂದಿಗೆ ಅಪಾರವಾದ ಪುರಾತನ ಹಸ್ತಪ್ರತಿಗಳನ್ನೂ ತಂದಿದ್ದು ಈಗ ಕೆಳದಿ ಸಂಶೋಧನಾಲಯದಲ್ಲಿ ಸಂರಕ್ಷಿಸಲಾಗಿದೆ. ಇವುಗಳಲ್ಲಿ ತಿಗಳಾರಿ ಹಸ್ತಪ್ರತಿಗಳೂ ಸೇರಿತ್ತು. ಕೆಳದಿಯ ವೇದ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳಾಗಿದ್ದ ಮಹಾ ಮಹೋಪಾಧ್ಯಾಯ ವಿದ್ವಾನ್ ರಂಗನಾಥಶರ್ಮರವರು ನಮ್ಮ ಮನೆಯಲ್ಲಿಯೇ ಇದ್ದು ಅಧ್ಯಯನ ಕೈಗೊಂಡಿದ್ದುದನ್ನು ಈಗಲೂ ನೆನಪಿಸಿಕೊಳ್ಳುತ್ತಾರೆ. ಇವರ ಒತ್ತಾಸೆಯಿಂದಲೇ ನನಗೆ ತಿಗಳಾರಿ ಹಸ್ತಪ್ರತಿ ಅಧ್ಯಯನದ ಮನಸ್ಸಾಯಿತೆಂದೇ ಹೇಳಬೇಕು. ಇದಕ್ಕನುಗುಣವಾಗಿ ಭಾರತ ಸರಕಾರದಿಂದ ಶಿಷ್ಯವೇತನ ಹಾಗೂ ಸಂಶೋಧನಾದಿಗಳಿಗೆ ಆರ್ಥಿಕ ಸಹಾಯವೂ ಲಭಿಸಿತು. The catalogue of ancient tigalari palm Leaf Manuscripts (English) ಪ್ರಕಟವಾಯಿತು. ಜಪಾನ್ ಸರಕಾರದ 'ಕಿಟನೋಮಾರು' ಸಂಚಿಕೆಯೂ ಇದನ್ನು ವಿಮರ್ಶೆಗೆ ಒಳಪಡಿಸಿತು. ಇದನ್ನು ರಕ್ಷಿಸಲು ಯುನೆಸ್ಕೊ ನನಗೆ ಬೆಂಬಲ ವ್ಯಕ್ತಪಡಿಸಿತು. ಹಿಂದಿನ ಕರ್ನಾಟಕ ಸರಕಾರದ ಉನ್ನತ ಶಿಕ್ಷಣ ಸಚಿವ ದಿ. ಡಾ. ವಿ.ಎಸ್. ಆಚಾರ್ಯರವರು ನನ್ನನ್ನು ಭೇಟಿ ಮಾಡಿ ತುಳು ಮತ್ತು ತಿಂಗಳಾರಿ ಲಿಪಿ ಬಗ್ಗೆ ಇರುವ ವಿವಾದದ ಕುರಿತು ನನ್ನಲ್ಲಿ ಸ್ಪಷ್ಟೀಕರಣ ಕೇಳಿದ್ದು ಈಗ ಇತಿಹಾಸ.

ಒಟ್ಟಿನಲ್ಲಿ ತಿಗಳಾರಿ ಹಸ್ತಪ್ರತಿ ಜ್ಞಾನಭಂಡಾರಗಳನ್ನು ಮುಂದಿನ ಪೀಳಿಗೆಗೆ ಉಳಿಸಲು ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರದಿಂದ ಹೋರಾಟ ಕೈಗೊಂಡಿದ್ದು, ಇದನ್ನು ಬಲಡಿಸಲು ಬುದ್ಧಿಜೀವಿಗಳಾದಿಯಾಗಿ ಸಮಸ್ತರೂ ಕೈಜೋಡಿಸಿ ಇದಕ್ಕೆ ಬೆಂಬಲಿಸಲು ಕಳಕಳಿಯಿಂದ ಮನವಿ ಮಾಡಿಕೊಳ್ಳುವೆನು.



ಕೆಳದಿ ಜೋಯಿಸರ ಮನೆಯಲ್ಲಿದ್ದ ತಿಗಳಾರಿ ಲಿಪಿ ಕೃತಿಯ ಲಿಥೋ ಮುದ್ರಿತ ಪ್ರತಿ

## ಅನುಬಂಧ-೧

The so-called Tuḷu script

Tuḷu has been a spoken dialect. It has rich literature deposited in memory only through folk-lore. This language has rarely been employed as documentary and literary medium. Barring a very few epigraphs in this language, making use of this script, we have hardly any written literature in this language rendered in this script which happens to be a variation of the Malayāḷam script.

## ಗ್ರಂಥಋಣ


೧. Catalogue of Sanskrit Manuscripts, Mysore & Coorg, Lewis Rice-1884.

೨. ದೇವೀರಪ್ಪನವರ ಹಸ್ತಪ್ರತಿ ಇತಿಹಾಸ, ಕ.ಸಾ.ಪ. ಬೆಂಗಳೂರು.

೩. Alphabetical List of Mycrofilms in the Oriental Rescarch Institute, Mysore 1972.

೪. New Lights on Manuscriptology in Dr. Siriruddha Das, SSES Rescarch cen tre, Chennai-2007.

೫. 'Sri Puspaanjali, Dr. Srinivasan Commemoration Volume, Vol. II, Bharatiya Kala Prakashana, Delhi-2004.

೬. Dravidian Studies, A Qnarterly Research Journal, Dravidian university, Kuppam, A.P.

೭. ತಾಡವಾಲೆ ಗ್ರಂಥಸೂಚಿ ; ಸಂ. ರಾಜಗೋಪಾಲಾಚಾರ್ಯ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೧.

೮. Studies in Tuluva History & culture, Dr. Gururaya Bhat, Udupi.

೯. ಶ್ರೀರಾಮಚಂದ್ರಾಪುರ ಮಠದ ರಾಜಮಾನ್ಯ ಇತಿಹಾಸ ವೈಭವ ಸಂಪುಟ, ಸಂ: ಡಾ. ಗುಂಡಾಜೋಯಿಸ್, ಕೆಳದಿ.

೧೦. ಹಸ್ತಪ್ರತಿ ಅಧ್ಯಯನ – ಸಮಾವೇಶ ಸಂಪುಟ ೧, ೨೦೧೨, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು.

೧೧. ತುಳುಹಸ್ತಪ್ರತಿ ಸೂಚಿ ಶ್ರೀಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನ, ಧರ್ಮಸ್ಥಳ.

೧೨. Introduction to Manuscriptology Dr. R.S. Shivaganesh Murthy, Sharada Pub lishing House, Delhi 1996.

೧೩. ಸಂಸ್ಕೃತ ಹಸ್ತಪ್ರತಿಗಳ ಸೂಚಿ: A Catalogue of Sanskrit Manuscripts, `Sri Manjunatheswara Cultural and Research Foundation, Dharmmastala.

೧೪. Catalogue of Ancient Tigalari Palm Leaf Manuscripts in India, Dr. Keladi Gunda jois, Govt of India, 1997.

೧೫. ತಿಗಳಾರಿ ತಾಳೆಯೋಲೆ ಹಸ್ತಪ್ರತಿಗಳ ವಿವರಣಾತ್ಮಕ ಗ್ರಂಥಸೂಚಿ, KMHRB 1999, ಡಾ. ಕೆಳದಿ ಗುಂಡಾಜೋಯಿಸ್.

೧೬. Manuscriptology, An Enterance, Dr. Jagannath, ORI, Mysore.

೧೭. Kitanomarn, Govt Archies of Japan.

೧೮. ಕನ್ನಡ ವಿಶ್ವಕೋಶ ಸಂಪುಟ.

# ಸಂಸ್ಕೃತ ಗ್ರಂಥಗಳ ವ್ಯಾಖ್ಯಾನಗಳು : ಒಂದು ಸಂಕ್ಷಿಪ್ತ ಟಿಪ್ಪಣಿ

◆

ಎಸ್. ಜಗನ್ನಾಥ

ಸಂಸ್ಕೃತ ಭಾಷೆಯಲ್ಲಿನ ವ್ಯಾಖ್ಯಾ ಸಂಪ್ರದಾಯ ಆರಂಭಗೊಂಡಿದ್ದು ವೇದದ ಕಾಲದಲ್ಲಿ. ಮೂಲ ವೇದಗಳನ್ನು ಸಂಹಿತೆಗಳೆಂದು ಕರೆಯಲಾಗುತ್ತದೆ. ಇವುಗಳ ಸಂಧಿಯನ್ನು ಬಿಡಿಸಿ ತೋರಿಸುವ ವಾಙ್ಮಯವೊಂದು ಉತ್ತರ ಕಾಲದಲ್ಲಿ ಬೆಳೆದು ಬಂದಿತು. ಇವುಗಳಿಗೆ ಪದಪಾಠಗಳೆಂದು ಹೆಸರು. ಸಂಧಿಗಳನ್ನು ಬಿಡಿಸಿ ಮೂಲದ ಅಂದರೆ, ಸಂಧಿ ಸೇರಿಸಿರುವ ಪದಗಳ ಅಭಿಪ್ರಾಯವನ್ನು ತಿಳಿಯಪಡಿಸುವ ಕಾರ್ಯ ವ್ಯಾಖ್ಯಾನದ ಮುಖ್ಯ ಸ್ವರೂಪವಷ್ಟೆ. ಹೀಗಾಗಿ ಪದಪಾಠಗಳನ್ನು ಸಂಸ್ಕೃತದ ಆದಿಮ ವ್ಯಾಖ್ಯಾನಗಳೆನ್ನಬಹುದು.

ಮುಂದೆ ವ್ಯಾಖ್ಯಾನವೆಂದು ನಾವು ಹೆಸರಿಸಬಹುದಾದದ್ದು ಬ್ರಾಹ್ಮಣ ಗ್ರಂಥಗಳನ್ನು. ಇಲ್ಲಿ ಬ್ರಹ್ಮವೆಂದರೆ ವೇದವೆಂದೂ ಬ್ರಾಹ್ಮಣವೆಂದರೆ ಬ್ರಹ್ಮದ, ಅರ್ಥಾತ್ ವೇದದ ವ್ಯಾಖ್ಯಾನವೆಂದೂ ಅಭಿಪ್ರಾಯ. ಶಬ್ದಗಳ ಸಾಂಪ್ರದಾಯಿಕ ನಿರ್ವಚನ ಹಾಗೂ ವೇದಸಂಹಿತೆಗಳಲ್ಲಿನ ಮಂತ್ರಗಳ ತಾತ್ಪರ್ಯಗಳನ್ನು ಬಿಡಿಸಿ ತೋರಿಸುವ ಕಥೆಗಳು ಇವುಗಳ ಮೂಲಕ ಇವು ಪರಮಪ್ರಾಚೀನವಾದ ವಿಸ್ತೃತ ವೇದವ್ಯಾಖ್ಯಾನಗಳೆನ್ನಿಸಿವೆ. ಈ ಬ್ರಾಹ್ಮಣ ಗ್ರಂಥಗಳಲ್ಲಿ ಬಂದಿರುವ ವ್ಯಾಖ್ಯಾನಗಳು ಕೆಲವೊಮ್ಮೆ ನಂಬಿಕೆಯ ಮೂಲದಿಂದಲೂ ಸೃಷ್ಟಿಯಾಗಿವೆ.

ವೇದದಲ್ಲಿನ ಶಬ್ದಗಳಲ್ಲಿ ಕೆಲವನ್ನು (ಸುಮಾರು ೨೫೦೦) ಆಯ್ದುಕೊಂಡು ವಿಷಯಕ್ಕೆ ಅನುಗುಣವಾಗಿ ಯಾರೋ ಪಟ್ಟಿ ಮಾಡಿದ್ದರು (ಯಾರೆಂದು ಗೊತ್ತಿಲ್ಲ). ಈ ಪಟ್ಟಿಗೆ ನಿಘಂಟು ಎಂದು ಹೆಸರು. ಈ ನಿಘಂಟು ಎಂಬ ಹೆಸರಿನ ಪದಗಳ ಪಟ್ಟಿಗೆ ಒಂದು ವಿಸ್ತೃತವಾದ ವ್ಯಾಖ್ಯಾನ ರಚಿತವಾಗಿದೆ. ರಚಿಸಿದವನ ಹೆಸರು, ಯಾಸ್ಕ ಅಥವಾ ಯುಸ್ಕಾಚಾರ್ಯ. ಈ ವ್ಯಾಖ್ಯಾನವು ವೇದದ ಅರ್ಥ ಮಾಡಿಕೊಳ್ಳುವುದರಲ್ಲಿ ತುಂಬಾ ಮಹತ್ವಪೂರ್ಣವಾದ ಸಹಾಯವನ್ನು ನೀಡುತ್ತದೆ.

ಸಂಸ್ಕೃತದಲ್ಲಿನ ವ್ಯಾಖ್ಯಾನಗಳನ್ನು ಪ್ರಧಾನವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. ಶಾಸ್ತ್ರ ವ್ಯಾಖ್ಯಾನ ಹಾಗೂ ಸಾಹಿತ್ಯ ವ್ಯಾಖ್ಯಾನ, ಶಾಸ್ತ್ರಗಳೆಂದರೆ, ವ್ಯಾಕರಣ, ಆಯುರ್ವೇದ, ತಂತ್ರ, ಜ್ಯೋತಿಷ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಭಗವದ್ಗೀತೆ, ಯೋಗ, ಸಾಂಖ್ಯ, ನ್ಯಾಯ, ವೈಶೇಷಿಕ, ಮೀಮಾಂಸಾ ಇತ್ಯಾದಿ. ಸಾಹಿತ್ಯವೆಂದರೆ, ಗದ್ಯ, ಚಂಪೂ, ನಾಟಕ, ಸುಭಾಷಿತ, ಸ್ತೋತ್ರ ಇತ್ಯಾದಿ. ಸಂಸ್ಕೃತದಲ್ಲಿ ಬಹುತೇಕ ಶಾಸ್ತ್ರಗಳ ಮೂಲಕೃತಿಗಳು ಸೂತ್ರರೂಪದಲ್ಲಿವೆ. ಸೂತ್ರಗಳಿಗೆ ಭಾಷ್ಯಗಳು ಸೂತ್ರಗಳ ಅರ್ಥದ ವಿವರಣೆ ನೀಡುವುದಲ್ಲದೆ, ಸೂತ್ರಗಳ ಅಭಿಪ್ರಾಯಗಳನ್ನು ಎಷ್ಟು ಒಪ್ಪಬಹುದು ಎಷ್ಟು ಬಿಡಬೇಕಾಗಿ ಬರಬಹುದು ಇತ್ಯಾದಿ ವಿಸ್ತೃತ ವಿಶ್ಲೇಷಣೆ ನಡೆಸುತ್ತವೆ. ವಾರ್ತಿಕಗಳೆಂಬ ಹೆಸರಿನ ವ್ಯಾಖ್ಯಾನಗಳು ಭಾಷ್ಯಗಳನ್ನೇ ವಿಮರ್ಶೆ ಮಾಡುವುದುಂಟು.

ವ್ಯಾಕರಣಶಾಸ್ತ್ರ ಒಂದರಲ್ಲಿ ಮಾತ್ರ ಈ ಕ್ರಮ ಹಿಂದು ಮುಂದಾಗಿ, ಸೂತ್ರದ ಅನಂತರ ವಾರ್ತಿಕ ತದನಂತರ ವಾರ್ತಿಕ ಹಾಗೂ ಸೂತ್ರ ಈ ಎರಡರ ವಿಶ್ಲೇಷಣೆ ಹಾಗೂ ವಿಮರ್ಶೆ ಇವುಗಳ ಉದ್ದೇಶಕ್ಕಾಗಿ ಭಾಷ್ಯದ ರಚನೆಯಾಗಿದೆ.

ಸಂಸ್ಕೃತದ ಸ್ವತಂತ್ರ ಶಾಸ್ತ್ರ ಗ್ರಂಥಗಳಲ್ಲಿನ ವ್ಯಾಖ್ಯಾನಗಲ್ಲಿ, ಮೂಲವನ್ನು ಆರಂಭ ಬಿಂದುವಿನಂತೆ ಇಟ್ಟುಕೊಂಡು ಅಲ್ಲಿಂದ ಮುಂದೆ ವಿಚಾರವನ್ನು ವಿಸ್ತಾರವಾಗಿ ಸ್ವತಂತ್ರವಾಗಿ ಬೆಳೆಸಿರುವ ಕ್ರಮ ಹೆಚ್ಚಿನ ವ್ಯಾಖ್ಯಾನಗಳಲ್ಲಿ ಕಾಣಸಿಗುತ್ತದೆ. ಮೂಲಗ್ರಂಥಕರ್ತೃವೇ ತನ್ನ ಗ್ರಂಥಕ್ಕೆ ತಾನೇ ವ್ಯಾಖ್ಯಾನ ಬರೆಯುವುದು ಸಂಸ್ಕೃತದಲ್ಲಿ ಅತಿ ಸಾಧಾರಣ ವಿಷಯ. ಉದಾಹರಣೆಗೆ ಅನ್ನಂಭಟ್ಟರು ತಾನು ರಚಿಸಿರುವ ತರ್ಕಸಂಗ್ರಹವೆಂಬ ಗ್ರಂಥಕ್ಕೆ ತಾನೇ ದೀಪಿಕಾ ಎಂಬ ಹೆಸರಿನ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ಪಟ್ಟಿಗೆ, ಭಟ್ಟೋಜಿ ದೀಕ್ಷಿತನ ಸಿದ್ಧಾಂತಕೌಮುದಿಯೆಂಬ ವ್ಯಾಕರಣ ಗ್ರಂಥಕ್ಕೆ ಸ್ವಯಂ ಭಟ್ಟೋಜಿಯೇ ಸಮರ್ಥನ ರೂಪವಾಗಿ ಬರೆದ ಪ್ರೌಢಮನೋರಮಾ ಎಂಬ ಹೆಸರಿನ ವ್ಯಾಖ್ಯಾಗ್ರಂಥವನ್ನು ಉಲ್ಲೇಖಿಸಬಹುದು. ಹೀಗೆಯೇ ವೇದಾಂತದೇಶಿಕರು ರಚಿಸಿದ ತತ್ತ್ವಮುಕ್ತಾಕಲಾಪವೆಂಬ ವಿಶಿಷ್ಟಾದ್ವೈತ ಗ್ರಂಥಕ್ಕೆ ಸ್ವಯಂ ಅವರೇ ರಚಿಸಿದ ಸರ್ವಾರ್ಥಸಿದ್ಧಿ ಎಂಬ ವ್ಯಾಖ್ಯಾನವನ್ನು ಉದಾಹರಣೆಯಾಗಿ ನೀಡಬಹುದು. ಬೇರೆ ವಿದ್ವಾಂಸರು ಮೂಲಕ್ಕೆ ಸ್ವತಂತ್ರವಾಗಿ ವ್ಯಾಖ್ಯಾನ ರಚಿಸಿರುವುದುಂಟು, ಅಲ್ಲದೆ ಒಬ್ಬರೇ ವಿದ್ವಾಂಸರೂ ಮೂಲಕ್ಕೂ ವ್ಯಾಖ್ಯಾನ ಹಾಗೂ ಗ್ರಂಥಕರ್ತೃ ಸ್ವಯಂ ರಚಿಸಿರುವ ವ್ಯಾಖ್ಯಾನಕ್ಕೂ ಉಪವ್ಯಾಖ್ಯಾನ ಹೀಗೂ ರಚಿಸಿರುವುದುಂಟು. ಉದಾ. ತರ್ಕಸಂಗ್ರಹಕ್ಕೆ ಸ್ವತಂತ್ರವಾಗಿ ವ್ಯಾಖ್ಯಾನ ರಚಿಸಿದ ಅನೇಕ ವಿದ್ವಾಂಸರು ಅದರ ದೀಪಿಕಾ ಎಂಬ ಹೆಸರಿನ ಗ್ರಂಥಕರ್ತೃರಚಿತ ವ್ಯಾಖ್ಯಾನಕ್ಕೂ ಪ್ರತ್ಯೇಕವಾಗಿ ವ್ಯಾಖ್ಯಾನ ರಚಿಸಿದ್ದಾರೆ. ಒಂದೇ ಗ್ರಂಥಕ್ಕೆ ಎರಡೆರಡು ವ್ಯಾಖ್ಯಾನಗಳನ್ನು ಒಬ್ಬರೇ ವಿದ್ವಾಂಸರು ರಚಿಸಿರುವ ಉದಾಹರಣೆಗಳೂ ಉಂಟು. ಉದಾಹರಣೆಗೆ ಹೇಳುವುದಾದರೆ ಮಧುಸೂದನ ಸರಸ್ವತಿ ಎಂಬುವರು ರಚಿಸಿರುವ ಅದ್ವೈತಸಿದ್ಧಿ ಎಂಬ ಗ್ರಂಥಕ್ಕೆ ಲಘುಚಂದ್ರಿಕಾ ಹಾಗೂ ಗುರುಚಂದ್ರಿಕಾ ಎಂಬ ಎರಡು ವ್ಯಾಖ್ಯಾನಗಳನ್ನು ಗೌಡಬ್ರಹ್ಮಾನಂದ ಎಂಬ ಒಬ್ಬರೇ ವಿದ್ವಾಂಸರು ರಚಿಸಿದ್ದಾರೆ.

ಸಾಹಿತ್ಯ ಕೃತಿಗಳ ವ್ಯಾಖ್ಯಾನಗಳು ಹೆಚ್ಚಿನ ಸಂದರ್ಭದಲ್ಲಿ ಪ್ರತಿಪದಾರ್ಥ, ವ್ಯಾಕರಣದ ವಿಚಾರವನ್ನು ಸ್ಪಷ್ಟಪಡಿಸುವುದು, ತಾತ್ಪರ್ಯ, ಅಲಂಕಾರ ಧ್ವನಿ ಇತ್ಯಾದಿಗಳನ್ನು ತೋರಿಸುವುದು, ಕೋಶಗ್ರಂಥಗಳನ್ನು ಆಧಾರವಾಗಿ ಕಾಣಿಸುವುದು, ಛಂದಸ್ಸುಗಳ ಲಕ್ಷಣಗಳನ್ನು ಕೊಡುವುದು ಈ ಕ್ರಮದಲ್ಲಿರುತ್ತದೆ. ಪುರಾಣ ರಾಮಾಯಣ ಮಹಾಭಾರತ ಇತ್ಯಾದಿಗಳಲ್ಲಿ ಮಧ್ಯೆ ಮಧ್ಯೆ ಪಾಠಾಂತರಗಳ ಚರ್ಚೆಯೂ ಬರುತ್ತದೆ. ಹಾಗೂ ವಿಮರ್ಶೆಗಳೂ ವಿಸ್ತೃತವಾಗಿ ಬರುತ್ತವೆ. ರಾಮಾಯಣದ ಪದಗಳ ಅರ್ಥಗಳ ಜೊತೆಗೆ ಕಥಾವಿಮರ್ಶೆಯನ್ನೂ ಮಾಡಬೇಕಾದದ್ದು ರಾಮಾಯಣ ವ್ಯಾಖ್ಯಾನಗಳಲ್ಲಿ ಅವಶ್ಯಕವಾಗುತ್ತದೆ. ವಾಲಿವಧೆಯ ಪ್ರಸಂಗ ಇತ್ಯಾದಿ ಪ್ರಸಂಗಗಳ ಚರ್ಚೆಯನ್ನು ರಾಮಾಯಣ ವ್ಯಾಖ್ಯಾನಗಳು ಸಾಧಾರಣವಾಗಿ ವಿಸ್ತೃತವಾಗಿಯೇ ಕೈಗೊಳ್ಳುತ್ತದೆ.

ಕೆಲವೊಮ್ಮೆ ವ್ಯಾಖ್ಯಾನಗಳು ವಿಸ್ತೃತವಾದ ರೀತಿಯಲ್ಲಿ ಶಾಸ್ತ್ರೀಯ ಮಾಹಿತಿಗಳನ್ನು ಕೊಡುವುದುಂಟು. ಲಲಿತಾಸಹಸ್ರ ನಾಮಕ್ಕೆ ಭಾಸ್ಕರಾಚಾರ್ಯ ರಚಿಸಿರುವ ಸೌಭಾಗ್ಯ ಭಾಸ್ಕರವೆಂಬ ಹೆಸರಿನ ವ್ಯಾಖ್ಯಾನ, ಲಕ್ಷ್ಮೀಧರನೆಂಬ ಹೆಸರಿನ ವಿದ್ವಾಂಸರು ಸೌಂದರ್ಯಲಹರಿಗೆ ರಚಿಸಿರುವ ಲಕ್ಷ್ಮೀಧರಾ ಎಂಬ ವ್ಯಾಖ್ಯಾನ ಇವು, ತಂತ್ರಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ ಆಕರಗ್ರಂಥಗಳಾಗಿವೆ.

ಕೆಲವು ವಿದ್ವಾಂಸರು ವ್ಯಾಖ್ಯಾನಗಳನ್ನು ರಚಿಸಿದ್ದರಿಂದಲೇ ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಮಲ್ಲಿನಾಥನೆಂಬ ವಿದ್ವಾಂಸನು ಸಂಸ್ಕೃತದ ಪಂಚಮಹಾಕಾವ್ಯಗಳು ಹಾಗೂ ಇನ್ನೂ ಕೆಲವು ಕಾವ್ಯಗಳು ಇವುಗಳಿಗೆ ವ್ಯಾಖ್ಯಾನ ರಚಿಸಿದ್ದರಿಂದಲೇ ಪ್ರಸಿದ್ಧನಾಗಿದ್ದಾನೆ. ಸಾಹಿತ್ಯಕೃತಿಯು ಎಷ್ಟೇ ಚಿಕ್ಕದಾಗಿದ್ದರೂ ಅದಕ್ಕೆ ವ್ಯಾಖ್ಯಾನವನ್ನು ಬರೆಯುವ ಸಂಪ್ರದಾಯ ಸಂಸ್ಕೃತದಲ್ಲಿ ರೂಢ ಮೂಲವಾಗಿದೆ.

ಸಂಸ್ಕೃತ ವ್ಯಾಖ್ಯಾನಗಳಲ್ಲಿನ ವಿಶೇಷವೇನೆಂದರೆ, ವ್ಯಾಕರಣವ್ಯುತ್ಪತ್ತಿಗಳನ್ನು ಸ್ಪಷ್ಟವಾಗಿ ಪಾಣಿನಿಸಂಪ್ರದಾಯಕ್ಕೆ ಅನುಗುಣವಾಗಿ ವಿಸ್ತಾರವಾಗಿ ತೋರಿಸುವುದು. ಸಾಯಣಾ ಚಾರ್ಯರು ವೇದಗಳಿಗೆ ವ್ಯಾಖ್ಯಾನ ಬರೆದಿರುವುದು ಮಹತ್ವಪೂರ್ಣವಾಗುವುದು ಈ ಕಾರಣಕ್ಕೇ. ಅವರು ವ್ಯಾಕರಣದ ಹಿನ್ನೆಲೆಯಲ್ಲಿ ವಿಸ್ತೃತವಾಗಿ ಅರ್ಥಗಳನ್ನು ಬಿಡಿಸಿ ತೋರಿಸಿರುವುದು ಮುಂದಿನವರು ವೇದಾಭ್ಯಾಸ ಮಾಡಲು ತುಂಬಾ ಸೊಗಸಾದ ದಾರಿಗಳನ್ನು ತೋರಿಸಿತು. ಅನೇಕ ಕಡೆ ಸಾಯಣಾಚಾರ್ಯರು ರಚಿಸಿರುವ ವ್ಯಾಖ್ಯಾನದ ಅರ್ಥದ ಬಗೆಗೆ ವಾದಗಳು ಪ್ರಾರಂಭಗೊಂಡಿದ್ದರೂ ಸಹ ಸಾಯಣರನ್ನು ಪೂರ್ತಿಯಾಗಿ ಮರೆತು ವೇದಗಳ ಅರ್ಥವನ್ನು ಮಾಡಿಕೊಳ್ಳಲು ಸಾಧ್ಯವಿಲ್ಲ ಎಂಬುದೂ ಅಷ್ಟೇ ಸತ್ಯ.

ಅಮರಕೋಶವು ಸಂಸ್ಕೃತದ ಪ್ರಾತಿನಿಧಿಕ ಪರ್ಯಾಯ ಪದಕೋಶವಷ್ಟೆ. ಅದಕ್ಕೆ ನಾಚಿರಾಜನು ರಚಿಸಿರುವ ಪ್ರಾಚೀನ ಕನ್ನಡವ್ಯಾಖ್ಯಾನವಿದೆ.

ಒಮ್ಮೊಮ್ಮೆ ಕನ್ನಡ ನಾಡಿನ ಸಂಸ್ಕೃತವಿದ್ವಾಂಸರು ಸಂಸ್ಕೃತಗ್ರಂಥಗಳಿಗೆ ಕನ್ನಡ ಹಾಗೂ ಸಂಸ್ಕೃತ ಎರಡರಲ್ಲೂ ವ್ಯಾಖ್ಯಾನ ಬರೆದಿರುವುದು ಕುತೂಹಲಕರ ವಿಚಾರ. ಉದಾಹರಣೆಗೆ, ಕೆಳದಿ ಬಸವಭೂಪಾಲನ ಆಜ್ಞೆಯ ಮೇರೆಗೆ ಹೆದ್ದಸೆ ಹರಿ ಎಂಬ

ವಿದ್ವಾಂಸನು ವಿರೂಪಾಕ್ಷ ಪಂಚಾಶಿಕಾಗಮಶಾಸ್ತ್ರವೆಂಬ, ಆರ್ಯಾಛಂದಸ್ಸಿನ ಅಜ್ಞಾತಕರ್ತೃಕವಾದ ಆದರೆ, ಶಿವನೇ ದೇವೇಂದ್ರನಿಗೆ ಉಪದೇಶಿಸಿದ್ದು ಎಂಬುದಾಗಿ ಹೇಳಿಕೊಳ್ಳುವ ಶಿವಾದ್ವೈತದರ್ಶನದ ಗ್ರಂಥಕ್ಕೆ ತಾತ್ಪರ್ಯಾನ್ವಯ ಪ್ರಕಾಶಿಕೆ ಎಂಬ ಹೆಸರಿನಲ್ಲಿ ಕನ್ನಡದಲ್ಲಿಯೂ, ತಾತ್ಪರ್ಯಾನ್ವಯದೀಪಿಕೆ ಎಂಬ ಹೆಸರಿನಲ್ಲಿ ಸಂಸ್ಕೃತದಲ್ಲಿಯೂ ಎರಡು ವ್ಯಾಖ್ಯಾನಗಳನ್ನು ರಚಿಸಿದ್ದಾನೆ. ನಾಗಾನಂದೀಯಸೂತ್ರವೆಂಬ ಮತ್ತೊಂದು ಗ್ರಂಥಕ್ಕೂ ಇದೇ ಹೆದ್ದಸೆ ಹರಿಯು ಸಂಸ್ಕೃತ ಹಾಗೂ ಕನ್ನಡದಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾನೆ. (ಈ ವ್ಯಾಖ್ಯಾನಗಳ ಹೆಸರು ನನಗೆ ಗೊತ್ತಿಲ್ಲ).

ಶ್ರೀವಾಸು ಪೂಜ್ಯರ್ಷಿ ಎಂಬುವನಿಂದ ರಚಿತವಾದ ದಾನಲಕ್ಷಣ ಅಥವಾ ದಾನಶಾಸನ ಎಂಬ ಸಂಸ್ಕೃತಗ್ರಂಥವೂ ಅದಕ್ಕೆ ಕನ್ನಡದಲ್ಲಿ ಅಜ್ಞಾತಕರ್ತೃಕವಾದ ವಿಸ್ತೃತ ವ್ಯಾಖ್ಯಾನವೂ ಇರುವ ಹಸ್ತಪ್ರತಿಯೊಂದು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಪತ್ತೆಯಾಗಿದೆ. ಇದು ಜೈನಪರಂರೆಗೆ ಅನುಗುಣವಾಗಿ ದಾನದ ವಿವಿಧ ಕ್ರಮಗಳನ್ನು ವಿಸ್ತಾರವಾಗಿ ನಿರೂಪಿಸುತ್ತದೆ. ಕನ್ನಡ ವ್ಯಾಖ್ಯಾನದಲ್ಲಿ ಮಧ್ಯೆ ಮಧ್ಯೆ ವಿಪುಲವಾದ ಉದ್ಧರಣೆಗಳಿವೆ. ಅವು ಕನ್ನಡದ್ದು ಮಾತ್ರವಲ್ಲದೆ, ಸಂಸ್ಕೃತದ್ದೂ ಆಗಿವೆ.

ಸಂಸ್ಕೃತದ ಗ್ರಂಥಗಳಿಗೆ ಇರುವ ಇಂಥ ಕನ್ನಡ ವ್ಯಾಖ್ಯಾನಗಳ ಸ್ವರೂಪದ ಬಗೆಗೆ ಹೆಚ್ಚಿನ ಸಂಶೋಧನೆಯ ಆವಶ್ಯಕತೆ ಇದೆ.

ಕನ್ನಡದಲ್ಲಿ ವ್ಯಾಖ್ಯಾನಗಳಿದ್ದರೂ ಏಕೋ ಏನೋ ಮೂಲದೊಡನೆ ಸ್ಪಷ್ಟವಾಗಿ ಅವುಗಳನ್ನು ಅಚ್ಚು ಮಾಡುವ ಪರಂಪರೆ ಬೆಳೆದಿಲ್ಲ. ಆ ವಿಷಯ ಹಾಗಿರಲಿ, ಕೆಲವಕ್ಕಂತೂ ವ್ಯಾಖ್ಯಾನಗಳಿವೆ ಎಂಬ ವಿಚಾರವೇ ಸಾರ್ವಜನಿಕರಿಗೆ ತಿಳಿದಿಲ್ಲ. ಉದಾಹರಣೆಗೆ ಹೇಳುವುದಾದಲ್ಲಿ ವಚನಗಳಿಗೆ ವ್ಯಾಖ್ಯಾನಗಳನ್ನು ಹಿಂದಿನ ಕಾಲದಿಂದಲೇ ರಚಿಸಲಾಗಿದೆ ಎಂಬ ವಿಷಯ ಸ್ವಯಂ ನನಗೇ ಮೊದಲು ಗೊತ್ತಿರಲಿಲ್ಲ. ಮೂಲವನ್ನು ದಪ್ಪಕ್ಷರಗಳಲ್ಲಿ ಅಚ್ಚು ಮಾಡಿ, ವ್ಯಾಖ್ಯಾನಗಳನ್ನು ಮೂಲದೊಡನೆಯೇ ಸಣ್ಣ ಅಕ್ಷರಗಳಲ್ಲಿ ಸೊಗಸಾಗಿ ಅಚ್ಚು ಮಾಡುವ ಪರಂಪರೆಯೇ ಸಂಸ್ಕೃತದಲ್ಲಿದೆ. ಮೂಲದ ವಾಚ್ಯಾರ್ಥವೇನೆಂದು ಮೊದಲು ಸರಿಯಾಗಿ ತಿಳಿದರೆ ಲಕ್ಷ್ಯಾರ್ಥ ವ್ಯಂಗ್ಯಾರ್ಥಗಳನ್ನು ಆಮೇಲೆ ವಿಚಾರ ಮಾಡಬಹುದು. ದುರದೃಷ್ಟವಶಾತ್, ಕೇಶಿರಾಜನ ಶಬ್ದಮಣಿದರ್ಪಣ ಬಿಟ್ಟರೆ ಮೂಲದೊಡನೆ ವ್ಯಾಖ್ಯಾನವನ್ನು ಪೂರ್ಣವಾಗಿ ಮುದ್ರಿಸುವ ಪರಿಪಾಠವೇ ನಮ್ಮಲ್ಲಿ ಬೆಳೆದಿಲ್ಲ.

ಅಮರಕೋಶದ ನಾಚಿರಾಜೀಯ ವ್ಯಾಖ್ಯಾನವೇ ಇನ್ನೂ ಎಲ್ಲಿಯೂ ಮುದ್ರಿತವಾಗಿಲ್ಲವೆಂದರೆ, ವ್ಯಾಖ್ಯಾನಗಳ ಬಗೆಗೆ ನಮ್ಮಲ್ಲಿ ಇರುವ ಅಸಡ್ಡೆಗೆ ಬೇರೆ ಪ್ರಮಾಣವೇ ಬೇಕಿಲ್ಲ.

■

# ಪಂಪಭಾರತದ ಒಂದು ಪದ್ಯದ ಪಾಠ ಮತ್ತು ಅರ್ಥಜಿಜ್ಞಾಸೆ



ಡಾ. ಆರ್. ಲಕ್ಷ್ಮೀನಾರಾಯಣ

ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱತಂದದಿಂ
ನುಡಿದೆಯಲ್ತೆ ಮದಾಯಮಮೋಘಂ ಸೂಟ್ಪಿಡೆಯಲ್ಕೆನಗಕ್ಕುಮಿ
ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ (೧೨-೫೬)

ಪಂಪಭಾರತದ ಈ ಪದ್ಯ ಅರ್ಥ ಮತ್ತು ಪಾಠದ ದೃಷ್ಟಿಯಿಂದ ಹಲವು ವರ್ಷಗಳಿಂದ ಸಮಸ್ಯಾತ್ಮಕವಾಗಿಯೇ ಉಳಿದಿವೆ. ಆದರೆ ಈ ಪದ್ಯವನ್ನು ಅದರ ಸಂದರ್ಭ ಮತ್ತು ಹಿನ್ನೆಲೆಯೊಂದಿಗೆ ಸರಿಯಾಗಿ ವಿಶ್ಲೇಷಿಸಿದಾಗ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವುದೇನೂ ಕಷ್ಟವಲ್ಲ.

ಈ ಪದ್ಯದ ಸಂದರ್ಭ ಹೀಗಿದೆ :

ಭೀಷ್ಮ, ದ್ರೋಣರು ಸೇನಾಧಿಪತಿಗಳಾಗಿ ಕೌರವ ಸೈನ್ಯವನ್ನು ಮುನ್ನಡೆಸಿದ ಕಾಲ ಕಳೆದು, ಸೇನಾಧಿಪತಿಯಾಗಿ ಕೌರವ ಸೈನ್ಯವನ್ನು ಮುನ್ನಡೆಸುವ ಹೊಣೆ ಇದೀಗ ಕರ್ಣನ ಪಾಲಿಗೆ ಬಂದಿದೆ. ಆ ದಿನ ಬೆಳಿಗ್ಗೆ ಕರ್ಣನು ಮಾಡಿದ ಮೊದಲ ಕೆಲಸವೆಂದರೆ ಎಂದಿನಂತೆ ದಾನಧರ್ಮಗಳನ್ನು ಮಾಡಿ ಆಯುಧಗಳು ತುಂಬಿದ ರಥವೇರಿ ಭೀಷ್ಮರ ಆಶೀರ್ವಾದ ಪಡೆಯಲು ಶರಮಂಚದಲ್ಲಿ ಮಲಗಿದ್ದ ಭೀಷ್ಮರೆಡೆಗೆ ಸಾಗುತ್ತಾನೆ. ಈ ಹಿಂದೆ ಭೀಷ್ಮರಿಗೆ ಸೇನಾಧಿಪತಿ ಪಟ್ಟ ಕಟ್ಟುವ ಸಂದರ್ಭದಲ್ಲಿ (ಪಂಪಭಾರತದ ಹತ್ತನೇ ಆಶ್ವಾಸದ ೧೬ನೇ ಪದ್ಯದಿಂದ ಪ್ರಾರಂಭಿಸಿ ೨೫ನೇ ಪದ್ಯದವರೆಗೆ) ಅವರನ್ನು ತುಚ್ಛೀಕರಿಸಿ ಮಾತಾಡಿದ್ದು ತಪ್ಪೆಂದು ಮನವರಿಕೆಯಾಗಿರುವುದೇ ಅವನ ಈ ನಡೆಗೆ ಕಾರಣ. ಅವರ ಪಾದಪದ್ಮಗಳನ್ನು ತಲೆಯ ಮೇಲಿಟ್ಟುಕೊಂಡು "ನಾನು ಮಾತಾಡಲು ತಿಳಿಯದೆ ತಮಗೆ ನೋವಾಗದಂತೆ ಮಾತಾಡಿದೆ. ಹಾಗಲ್ಲದೆ ಸುಮ್ಮನೆ ತಮ್ಮಂಥವರನ್ನು ಹೀಯಾಳಿಸಿ ನುಡಿಯಲು ನನ್ನಂಥವರಿಗೆ ಸಾಧ್ಯವೆ? ಮನಸ್ಸಿನ ಆ ಅಸಮಾಧಾನವನ್ನು ಮರೆಯಬೇಕು.

ನಿಮ್ಮ (ಕ್ಷಮೆ) ಬೇಡಲೆಂದೇ ಬಂದಿದ್ದೇನೆ. ಯುದ್ಧದಲ್ಲಿ ನಿಮ್ಮಂಥವರೂ ಗೆಲ್ಲಲು ಸಾಧ್ಯವಾಗದ ಆ ಪಾಂಡವರನ್ನು ನಮ್ಮಂಥವರು ಗೆಲ್ಲುತ್ತಾರೆಂಬುದು ಆಶ್ಚರ್ಯವಲ್ಲವೆ? ಅರ್ಜುನನೊಂದಿಗೆ ಹೋರಾಡಿ ನನ್ನ ಚಲವನ್ನೇ ಮೆರೆಯುತ್ತೇನೆ" ಎಂದು ಹೇಳಿದಾಗ ಅವನನ್ನು ಸಮಾಧಾನಪಡಿಸುತ್ತ ಭೀಷ್ಮರು ಹೇಳಿದ ಮಾತಾಗಿ ಈ ಪದ್ಯವಿದೆ.

ಈ ಪದ್ಯವನ್ನು ಅರ್ಥೈಸುವಲ್ಲಿ, ಸಮಸ್ಯೆ ಇದೆ ಎಂದು ಹೇಳುತ್ತ ಡಿ.ಎಲ್.ಎನ್. ಅವರು ತಮ್ಮ 'ಪಂಪಭಾರತ ದೀಪಿಕೆ'ಯಲ್ಲಿ–

"ಹೇಳುವುದನ್ನು ನೀನು ಸ್ವಾಮಿಭಕ್ತಿಯ ಹಿರಿಮೆಯಿಂದ ಹೇಳಿದೆ. ಬೇರೆ ರೀತಿಯಿಂದ ಮಾತಾಡಲಿಲ್ಲವಲ್ಲವೆ ? ನನ್ನ ಸಾಮರ್ಥ್ಯವು ವ್ಯರ್ಥವಲ್ಲದ್ದು. (ಹೀಗೆಂದು ತನ್ನನ್ನು ತಾನೇ ಹೊಗಳಿಕೊಳ್ಳುವನೆ? ಆದ್ದರಿಂದ ನನ್ನ ಲಾಭವು, ನನ್ನ ದರ್ಶನಲಾಭವು ವ್ಯರ್ಥವಲ್ಲದ್ದು ಎಂದಾಗಬಹುದು. 'ಆಯ' ಎಂಬ ಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥ ಕಾಣುವುದಿಲ್ಲ). ಸರದಿಯನ್ನು ಪಡೆಯುವುದಕ್ಕೆ ನನಗೆ ಆಗುತ್ತದೆ ಇನ್ನು ನಡುವೆ ಎಂದು ಹೇಳಿದೆನು. ಹೇಳಿದ ಆ ಮಾತು ತಪ್ಪಾದುದೇ? ನಮ್ಮಿಬ್ಬರ ಗುರುಗಳು ಕೀರ್ತಿವಂತರಾದ ಪರಶುರಾಮರು. ಆದ ಕಾರಣದಿಂದ ಕರ್ಣನೇ ನಾವು ನಂಟರಾಗಿದ್ದೇವೆ" ಎಂದು ಇದರ ತಾತ್ಪರ್ಯ–ಎಂದಿದ್ದಾರೆ.

ಇಲ್ಲಿ ಸಮಸ್ಯೆ ಇರುವುದೆಲ್ಲ ಎರಡನೇ ಸಾಲಿನಲ್ಲಿ ಬರುವ

"ಮದಾಯಮಮೋಘಂ ಸೂಟ್ಪಿಡೆಯಲ್ಕೆನಗಕ್ಕುಮಿನ್ನೆಡೆಯೊಳೆಂದೆಮದೆಂದು..." ಭಾಗದಲ್ಲಿ.

ಡಾ. ಎಲ್. ಬಸವರಾಜು ಅವರು ಈ ಪದ್ಯವನ್ನು ಅರ್ಥೈಸುತ್ತ "ಭೀಷ್ಮರು ಇಚ್ಛಾಮರಣಿಗಳು–ಬೇಕಾದಷ್ಟು ಆಯುಸ್ಸಿದೆ. ತಡೆದು ಯುದ್ಧ ಮಾಡಬಹುದಾಗಿತ್ತು. ಕರ್ಣನಿಗಾದರೋ ಅಂಥ ಆಯುಸ್ಸಿಲ್ಲ. ಆದ್ದರಿಂದಲೂ ಕರ್ಣ ಭೀಷ್ಮರಿಗಿಂತ ಮೊದಲು ವೀರಪಟ್ಟವನ್ನು ಕಟ್ಟಿಸಿಕೊಳ್ಳಲು ಅವಸರಪಟ್ಟಿದ್ದರಲ್ಲಿ ತಪ್ಪೇನೂ ಇಲ್ಲ ಎಂಬಂಥ ಮಾತುಗಳನ್ನು ಭೀಷ್ಮಾಚಾರ್ಯರು ಈ ಪದ್ಯಪರಿಮಿತಿಯಲ್ಲಿ ಹೇಳುತ್ತಾರೆ–ಕ್ಷಮೆ ಕೇಳಲು ಬಂದ ಕರ್ಣನಿಗೆ. ಹಿಂದೆ ೧೦–೨೩ರಲ್ಲಿ ಸೂಟ್ಪಿಡೆಯುಲಪ್ಪುದು ಕಣಾ ಮಹಾಜಿರಂಗದೊಳ್ ಎಂದು ತಾವೇ ಅವಸರಪಟ್ಟು ಕರ್ಣನಿಗೆ ಹೇಳಿದ್ದರು. ಅದನ್ನು ಇಲ್ಲಿ ಭೀಷ್ಮರು ಮನಗಂಡು ಮಿದುವಾದಂತ ಪಂಪ ಚಿತ್ರಿಸಿದ್ದಾನೆ" ಎಂದು ಹೇಳಿದ್ದಾರೆ. [ಪಂಪ ಭಾರತ–ಪು. ೪೫೮ರ ಅಡಿಟಿಪ್ಪಣಿ].

ಮೇಲಿನ ಇಬ್ಬರು ವಿದ್ವಾಂಸರ ಅರ್ಥೈಸುವಿಕೆಗಳೂ ಕಾವ್ಯದ ಸಂದರ್ಭದಲ್ಲಿ ಕವಿಯ ವಿವಕ್ಷಿತಾರ್ಥದಿಂದ ತೀರ ದೂರ ಸರಿದಿವೆ. ಇಲ್ಲಿ ಕರ್ಣನು ತಾನು ಈ ಹಿಂದೆ ಆಡಿದ ಮಾತುಗಳು ತಪ್ಪು ಎಂದು ಹೇಳಿದಾಗ, ಭೀಷ್ಮರು ಅವನನ್ನು ಸಮಾಧಾನಪಡಿಸುತ್ತ– ನೀನು ಆಡಿದ ಯಾವ ಮಾತುಗಳೂ ತಪ್ಪಲ್ಲ. ಅವೆಲ್ಲಾ ಸ್ವಾಮಿಯಾದ ದುರ್ಯೋಧನನ ಮೇಲಿನ ಭಕ್ತಿಯಿಂದ ಹೇಳಿದ್ದು. ನೀನು ಹೇಳಿದ್ದು ತಾನೆ ಏನು ಎನ್ನುತ್ತ ಅವನು

ಹೇಳಿದ ಮಾತುಗಳನ್ನೇ ಈಗ ಭೀಷ್ಮರು ತಮ್ಮ ಬಾಯಿಂದ ಹೇಳುತ್ತಿದ್ದಾರೆ. ಹಾಗಾಗಿ ಆವರಣ ಚಿಹ್ನೆಯಲ್ಲಿ ಇರುವುದೆಲ್ಲಾ ಕರ್ಣನು ಭೀಷ್ಮರಿಗೆ ಸೇನಾದಿಪತಿ ಪಟ್ಟ ಕಟ್ಟುವ ಸಂದರ್ಭದಲ್ಲಿ ಹೇಳಿದ ಮಾತುಗಳು. (ಅದರ ಅರ್ಥ "ನನ್ನ ಪರಾಕ್ರಮ ವ್ಯರ್ಥವಲ್ಲದ್ದು. ಅಂದರೆ ಸಾರ್ಥಕವಾದದ್ದು. ಈ ಸಂದರ್ಭದಲ್ಲಿ [ಇನ್ನೆಡೆಯೊಳ್] ಸೇನಾಧಿಪತಿಯ ಪಟ್ಟ ಪಡೆದುಕೊಳ್ಳುವುದು ನನಗೆ ಆಗಬೇಕು"). ಆದ್ದರಿಂದ "ಯೊಳೆಂದೆಮದೆಂ" ಎಂಬ ಅಕ್ಷರಸಮೂಹ ಮಧ್ಯಮಪುರುಷವಾಚಿಯಾಗಿ "ಯೊಳೆಂದಯದೆಂ" (ಯೊಳೆಂದಯ್+ಅದೆಂ) ಎಂದು ಆಗಬೇಕು. ಇಲ್ಲಿ ಪಾಠಾಂತರವೇನೂ ಇಲ್ಲದಿದ್ದರೂ ಹೀಗೆ ಒಂದು ಊಹಾತ್ಮಕ ಪರಿಷ್ಕರಣ 'ದೆಮ' – 'ದಯ' ಮಾಡಿಕೊಳ್ಳಬೇಕಾಗುತ್ತದೆ. ಮೂಲತಃ ಕವಿಪಾಠ 'ಯ' ಇದ್ದು ಅದು ಪ್ರತಿಕಾರರಿಗೆ 'ಮ' ಎಂಬಂತೆ ಕಂಡಿರುವುದೇನೂ ಅಸಂಭವವಲ್ಲ. ಹೀಗೆ ಇದು ಮಧ್ಯಮ ಪುರುಷವಾಚಿಯಾಗಿರುವ ಸಾಧ್ಯತೆಗೆ ಈ ಪದ್ಯದಲ್ಲೇ ನಿದರ್ಶನವಿದ್ದು (ಪತಿಭಕ್ತಿಯ ಪೆಂಪಿಂ ನುಡಿದ್ಯೆ=ನುಡಿದಯ್) ಅಂತಃ ಸಂಭಾವ್ಯತೆಯ ಸಮರ್ಥನೆಯೂ ಸಿಕ್ಕಿದಂತಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಭೀಷ್ಮರಿಗೆ ಸೇನಾಧಿಪತಿಪಟ್ಟ ಕಟ್ಟುವ ಸಂದರ್ಭದಲ್ಲಿ ಭೀಷ್ಮರ ಪರಾಕ್ರಮವನ್ನು ತುಚ್ಛೀಕರಿಸಿ ತನ್ನ ಪರಾಕ್ರಮವನ್ನು ಮುಂದೆ ಮಾಡುತ್ತ "ಪಗೆವರ ನಿಟ್ಟೆಲ್ವಂ ಮುರಿವೊಡೆನಗೆ ಪಟ್ಟಂಗಟ್ಟಾ" ಎಂದು ತನ್ನ ಹಕ್ಕನ್ನು ಪ್ರತಿಪಾದಿಸಿದ್ದವನು ಕರ್ಣನೇ ಹೊರತು ಭೀಷ್ಮನಲ್ಲವೇ ಅಲ್ಲ. ಅವನು ಮಾತೇ ಆಡದೆ ಸುಮ್ಮನೆ ಕುಳಿತಿದ್ದು ಎಲ್ಲ ಚರ್ಚೆ, ವಾಗ್ವಾದಗಳ ನಂತರ ಮಾತನಾಡಿದ.

"ಮದಾಯಮಮೋಘಂ" (ನನ್ನ ಪರಾಕ್ರಮ ವ್ಯರ್ಥವಲ್ಲದ್ದು) ಎಂಬುದು ಕರ್ಣ ಅಂದು ಆಡಿದ ಮಾತು. ಅದನ್ನು ಭೀಷ್ಮನು ಆಡಿದ ಮಾತೆಂದು ವಿದ್ವಾಂಸರಿಬ್ಬರೂ ತಪ್ಪಾಗಿ ಗ್ರಹಿಸಿದ್ದರಿಂದ ದೂರಾನ್ವಯವಾಗಿ ಅರ್ಥೈಸಲು ಎಡೆಯಾಗಿದೆ.

ಆದ್ದರಿಂದ ನೀನು ಹೀಗೆ ಹೇಳಿದ್ದೆ ಎಂಬ ಅರ್ಥದಲ್ಲಿ "ಮದಾಯಮಮೋಘಂ ಸೂಟ್ಟಿಡೆಯಲ್ಕೆನಗಕ್ಕುಮಿನ್ನೆಡೆಯೊಳ್" ಎಂಬ ಅವನದೇ ಮಾತನ್ನು ಅವನಿಗೆ ನೆನಪಿಸುತ್ತ + "ಎಂದಯ್+ಅದು ಎಂದುದು + ಅದೇಂ ತಪ್ಪಾದುದೆ" ಎಂದು ಪದವಿಭಾಗ ಮಾಡಿದಾಗ ಮಾತ್ರ ಪಂಪನ ಪದ್ಯದ ಆಶಯ ಸರಿಯಾಗಿ ಹೊರಪಡುತ್ತದೆ.

ವಾಸ್ತವವಾಗಿ ಇಲ್ಲಿ ವಿದ್ವಾಂಸರು ಗೊಂದಲಕ್ಕೀಡಾಗಲು ಕಾರಣವಾದ್ದು ಭೀಷ್ಮನಿಗೆ ಸೇನಾಧಿಪತಿಪಟ್ಟ ಕಟ್ಟಿದ ಸಂದರ್ಭದಲ್ಲಿ ಕೊನೆಯಲ್ಲಿ ಅವನು ಹೇಳಿದ "ಸೂಟ್ಟಿಡೆಯಲಪ್ಪುದು ಕಾಣಾ ಮಹಾಜಿರಂಗದೊಳ್" ಎಂಬ ಪದಗುಚ್ಛದಲ್ಲಿನ "ಸೂಟ್ಟಿಡೆ" ಶಬ್ದ. ಇದೇ ಶಬ್ದ ಪ್ರಸ್ತುತ ೧೨-೫೬ರಲ್ಲೂ ಭೀಷ್ಮನ ಬಾಯಿಂದ ಬಂದ ಮಾತಿನಲ್ಲಿದೆ.

ಮೇಲಿನ ಪದಗುಚ್ಛ ಭೀಷ್ಮ ತನ್ನ ಪರವಾಗಿ ಆಡಿದ್ದಲ್ಲ. ಕರ್ಣನನ್ನೂ ಒಳಗೊಂಡಂತೆ ಕೌರವಸೇನೆಯವರೆಲ್ಲರಿಗೂ ಅನ್ವಯಿಸಿದಂತೆ ಹೇಳಿದ ಸಾಮಾನ್ಯವಾದ ಮಾತು. ಆದರೆ ಇದೇ ಮಾತುಗಳನ್ನೇ ಬಳಸದಿದ್ದರೂ ಇದೇ ಅರ್ಥದ ಅಂದರೆ ಸೇನಾಧಿಪತಿ ಪಟ್ಟ ಕಟ್ಟಿಸಿಕೊಳ್ಳುವ ಸರದಿ ಈಗ ತನ್ನದಾಗಬೇಕು ಎಂದು ತನ್ನ ಹಕ್ಕನ್ನು ಮುಂದಿಟ್ಟವನು

ಕರ್ಣ. (ಪಗೆವರ ನಿಟ್ಟೆಲ್ವಂ ಮುರಿವೊಡೆ ಎನಗೆ ಪಟ್ಟಂಗಟ್ಟಾ). ತನ್ನ ಪರಾಕ್ರಮ ಅಥವಾ ಸಾಮರ್ಥ್ಯ ಸಾರ್ಥಕವನ್ನು (ಮದಾಯಮಮೋಘಂ) ಎಂದು ಭೀಷ್ಮ ಹೇಳಲೇ ಇಲ್ಲ. ಬದಲಿಗೆ ಭೀಷ್ಮರ ಪರಾಕ್ರಮವನ್ನು ತುಚ್ಛೀಕರಿಸಿ ತನ್ನ ಸಾಮರ್ಥ್ಯವನ್ನು ಮೇಲೆ ಮಾಡಿ ಮಾತಾಡಿದವನು ಕರ್ಣನೇ. ಆದ್ದರಿಂದ ಪದ್ಯದಲ್ಲಿ ಆವರಣ ಚಿಹ್ನೆಗಳಲ್ಲಿ ದಪ್ಪ ಅಕ್ಷರದಲ್ಲಿ ಇರುವ ಮಾತುಗಳನ್ನು ಕರ್ಣನು ಹಿಂದೆ ಆಡಿದ ಮಾತುಗಳನ್ನೇ ಭೀಷ್ಮನು ಅವರಿಗೆ ನೆನಪಿಸಸುವ ಸಲುವಾಗಿ ತನ್ನ ಬಾಯಿಂದ ಆಡಿದಂತೆ ಓದಿಕೊಂಡಾಗಲೇ ಕವಿ ವಿವಕ್ಷಿತ ಅರ್ಥಕ್ಕೆ ಬಾಧೆ ಉಂಟಾಗದೆ ಸಾರ್ಥಕವಾಗುವುದು.

ಪದ್ಯದ ಪರಿಷ್ಕೃತ ಪಾಠ ಹೀಗಾಗುತ್ತದೆ :

ನುಡಿವುದಂ ಪತಿಭಕ್ತಿಯ ಪೆಂಪಿ ನೀಂ ನುಡಿದೈ ಪೆಱತಂದದಿಂ  
ನುಡಿದೆಯಲ್ತೆ ಮುದಾಯಮಮೋಘಂ ಸೂಟ್ಪಿಡೆಯಲ್ಕೆನಗಕ್ಕುಮಿ  
ನ್ನೆಡೆಯೊಳೆಂದಯೆಂದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ  
ಬಡೆದ ಭಾರ್ಗವವರಪ್ಪುದಜೆಂದಂ ನಂಟರುಮಂಗಮಹೀಪತೀ

(ಯೊಳೆಂದಯೆಂದೆಂದುದದೇಂ=ಯೊಳೆಂದಯ್+ಎಂದುದದೇಂ.)

■

# ಕೋಲ ಶಾಂತಯ್ಯನ ವಚನಾಂಕಿತ ವಿಚಾರ: ಒಂದು ಟಿಪ್ಪಣಿ



ಪ್ರೊ. ಜಿ. ಅಶ್ವತ್ಥನಾರಾಯಣ

ಶಿವಶರಣರಲ್ಲಿ ಶಾಂತಯ್ಯನ ಹೆಸರಿನವರು ಹಲವರಿದ್ದಾರೆ. ಇಂಡಿಯ ಶಾಂತಯ್ಯ, ಓಲೆಯ ಶಾಂತಯ್ಯ, ನಿರ್ಲಜ್ಜ ಶಾಂತಯ್ಯ, ಸತ್ತಿಗೆ ಶಾಂತಯ್ಯ ಇತ್ಯಾದಿ ಶಿವಶರಣರಿದ್ದಾರೆ. ಅವರೆಲ್ಲರ ಹೆಸರಿನ ಮುಂದೆ ಅವರ ಕಾಯಕಸೂಚನೆ ಇರುವುದರಿಂದ ಅವರೆಲ್ಲ ಬೇರೆ ಬೇರೆಯವರು ಎಂದು ತಿಳಿಯುತ್ತದೆ. ಕೋಲ ಶಾಂತಯ್ಯನ ಹೆಸರಿನಲ್ಲಿ ಅವನ ಕಾಯಕ ಕೋಲು ಹಿಡಿಯುವುದು ಸೇರಿದೆ. ಕೋಲು ಹಿಡಿವ ಕಾಯಕ ಒಂದು ಮರ್ಯಾದೆಯ ಕಾಯಕವಾಗಿತ್ತು. ರಾಜರು ಅಥವಾ ಗುರುಗಳು ಹೊರಟಾಗ ಅವರ ಮುಂದೆ ರಾಜದಂಡ ಅಥವಾ ಧರ್ಮದಂಡದ ಸಂಕೇತವಾಗಿ ಗೌರವ ಸೂಚಕಾರ್ಥ ಕೋಲು ಹಿಡಿವ ಕಾಯಕವನ್ನು ಇಂದೂ ಕಾಣಬಹುದು. ಈ ವೃತ್ತಿ ವಂಶಪಾರಂಪರ್ಯವಾಗಿ ಬರುವುದು ಪದ್ಧತಿಯಾಗಿದೆ. "ಇವನು ಬಸವಣ್ಣನಲ್ಲಿ ಕಟ್ಟಿಗೆವಿಡಿದು ಮಾಲದಾರ ನಿಯೋಗವನ್ನು ನಡೆಸುವವನು" ಎಂಬ ಮಾತಿನಿಂದ ಇವನ ಕಾಯಕ ತಿಳಿದುಬರುತ್ತದೆ. ಇವನು ವಚನ ರಚಿಸಿರುವ ವಚನ ಸಂಖ್ಯೆಗಳು ಖಚಿತವಿಲ್ಲ. ಬಿ.ಎಸ್. ಸಣ್ಣಯ್ಯನವರು ಸಂಪಾದಿಸಿದ ಕೋಲ ಶಾಂತಯ್ಯನ ವಚನಗಳು ಗ್ರಂಥದಲ್ಲಿ ೬೪ ಸಾಮಾನ್ಯ ವಚನಗಳು, ೩೬ ಬೆಡಗಿನ ವಚನಗಳು, ಒಟ್ಟು ೧೦೦ ವಚನಗಳಿವೆ. ಸಂಗಮೇಶ ಸವದತ್ತಿಮಠ ಅವರ ವರ್ಣನಾತ್ಮಕ ವಚನ ಶಬ್ದಕೋಶ (ಪುಟ ೩೫೦) ದಲ್ಲಿ ಕೋಲ ಶಾಂತಯ್ಯನ ವಚನಗಳು ೧೦೩ ಎಂದಿದ್ದಾರೆ. ಇವನ ಕಾಲವನ್ನು ಕವಿ ಚರಿತೆಕಾರರು ಕ್ರಿ.ಶ. ೧೧೬೦ ಎಂದಿದ್ದಾರೆ. ಕೋಲ ಶಾಂತಯ್ಯನ ವಚನಾಂಕಿತ **ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ** ಎಂಬುದಾಗಿದೆ.

ಪುಣ್ಯಾರಣ್ಯದಹನ ಭೀಮೇಶ್ವರ ಲಿಂಗ ಅಂಕಿತ ಕೋಲ ಶಾಂತಯ್ಯನ ವಚನಗಳಲ್ಲಿ ಮಾತ್ರ ದೊರೆಯುತ್ತದೆ. ಅನಾಮಧೇಯ ವಚನವೊಂದರಲ್ಲಿ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ಎಂಬ ಅಂಕಿತ ವಚನಶಾಸ್ತ್ರಸಾರದ ಗ್ರಂಥದಲ್ಲಿ ಒಂದು ವಚನ

ಸಿಗುತ್ತದೆ. ಅದರ ಕರ್ತೃ ಯಾರೆಂದು ಗೊತ್ತಿಲ್ಲ. ಕೋಲು ಶಾಂತಯ್ಯನದೇ ವಚನ ಆಗಿರಬಹುದು ಎನಿಸುತ್ತದೆ.

ಕೋಲು ಶಾಂತಯ್ಯನ ವಚನಾಂಕಿತದಲ್ಲಿ ಪುಣ್ಯಾರಣ್ಯದಹನ ಎಂಬ ಮಾತು ಗಮನಿಸುವಂಥದ್ದಾಗಿದೆ. ಪುಣ್ಯಾರಣ್ಯದಹನ ಎಂದರೇನು ? ಪುಣ್ಯವೆಂಬ ಅರಣ್ಯವನ್ನು ದಹಿಸುವುದು ಎಂದರ್ಥವೇ. ಇದು ಸಮಂಜಸವೆನ್ನಿಸೀತೇ ? ಆದರೆ ಬಹುತೇಕ ಎಲ್ಲ ಸಂಪಾದಕರೂ ಕೋಲ ಶಾಂತಯ್ಯನ ವಚನಗಳನ್ನು ಉದ್ದರಿಸುವಲ್ಲಿ ಈ ಪಾಠವನ್ನೇ ಬಳಸಿದ್ದಾರೆ. ಭೂಸನೂರಮಠ ಅವರ ವಚನ ಸಂಗ್ರಹ ಗ್ರಂಥ, ಬಿ.ಎಸ್. ಸಣ್ಣಯ್ಯನವರ ಕೋಲ ಶಾಂತಯ್ಯನ ವಚನಗಳ ಸಂಪಾದನೆ, ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಿಸಿರುವ ವಚನ ಸಂಪುಟದಲ್ಲಿ (ಸಂಕೀರ್ಣ ವಚನ ಸಂಪುಟ-೨, ಸಂಪಾದಕರು ಎಸ್. ವಿದ್ಯಾಶಂಕರ) ಇತ್ಯಾದಿ ಗ್ರಂಥಗಳಲ್ಲಿ ಕೋಲ ಶಾಂತಯ್ಯನ ವಚನಗಳ ಅಂಕಿತ ಪುಣ್ಯಾರಣ್ಯ ದಹನ ಪಾಠವೇ ಇದೆ.

ಆದರೆ ವಚನಶಾಸ್ತ್ರ ರಹಸ್ಯದಲ್ಲಿ ರಂ.ರಾ. ದಿವಾಕರರು (ಪುಟ ೧೦೫ರಲ್ಲಿ) ವಿಧಿ ನಿಷೇಧಗಳು ಅಧ್ಯಾಯದಲ್ಲಿ ಕೋಲುಶಾಂತಯ್ಯನ ವಚನವನ್ನು ಉದ್ಧರಿಸುವಲ್ಲಿ ಪಾಪಾರಣ್ಯ ದಹನ ಎಂಬ ಪಾಠವನ್ನು ಕಾಣುತ್ತೇವೆ.

ಜಡೆಮುಡಿಯೊಳು ಹೇಗಿದ್ದರೇನೊ?
ನಡೆನುಡಿ ಸಿದ್ಧಾಂತವಾದರೆ ಸಾಕು
ಆತ ಸ್ವಯಂಜ್ಯೋತಿ ಗುರುವಹ
ಈ ಇರವ ನಿನ್ನ ನೀನರಿ
ಪಾಪಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗಾ

ಎಲ್. ಬಸವರಾಜು ಅವರು ಶಿವದಾಸ ಗೀತಾಂಜಲಿಯ ಎಲ್ಲ ವಚನಾಂಕಿತಗಳು ಮತ್ತು ವಚನಕಾರರು ಎಂಬ ಪರಿಶಿಷ್ಟದಲ್ಲಿ ಟಿಪ್ಪಣಿ ೨೩೬-೨೩೭ರಲ್ಲಿ ಪುಣ್ಯಾರಣ್ಯ ದಹನ, ಪುಣ್ಯಾರಣ್ಯದ ಘನ, ಪಾಪಾರಣ್ಯ ದಹನ ಎಂಬ ಮೂರು ಪಾಠಾಂತರಗಳನ್ನು ಗುರುತಿಸಿದ್ದಾರೆ.

೨೩೬ನೇ ಅಂಕಿತ ಪುಣ್ಯಾರಣ್ಯದ ಘನ ಎಂಬುದು ಪುಣ್ಯಾರಣ್ಯ ದಹನ ಎಂಬುದರ ಅಶುದ್ಧ ಪಾಠ ಎಂದಿದ್ದಾರೆ. ಪಾಪಾರಣ್ಯ ದಹನ ಎಂಬ ದಿವಾಕರರು ಬಳಸುವ ಪಾಠವನ್ನೂ ಕೊಟ್ಟಿದೆ. ಭೂಸನೂರ ಮಠ ಅವರು ನನ್ನೊಂದಿಗೆ ಒಮ್ಮೆ ಚರ್ಚಿಸುತ್ತಾ ಪುಣ್ಯಾರಣ್ಯದ ಘನ ಪಾಠ ಸರಿ. ಆದರೆ ಹಸ್ತಪ್ರತಿಯ ಘ, ಹ ಅಕ್ಷರ ಲಿಪಿಗಳ ವಿನ್ಯಾಸದ ಸಾದೃಶ್ಯದಿಂದ ದಹನ ಆಗಿದೆ ಎಂದಿದ್ದರು.

ಪುಣ್ಯಾರಣ್ಯದಹನ ಪಾಠವನ್ನು ಅನೇಕರು ಒಪ್ಪಿರಲು ಕಾರಣ ಬಹುಶಃ ಕೋಲ ಶಾಂತಯ್ಯನವರ ಬೆಡಗಿನ ವಚನದ ಟೀಕೆಯಲ್ಲಿ ಕೊಟ್ಟ ವಿವರಣೆಯನ್ನು ಗಮನಿಸಿರಬೇಕು. (ಬಿ.ಎಸ್. ಸಣ್ಣಯ್ಯ, ಕೋಲ ಶಾಂತಯ್ಯನ ವಚನಗಳು, ಪುಟ ೧೭) ಬೆಡಗಿನ

ವಚನದ ಟೀಕು ಗ್ರಂಥದಲ್ಲಿ ಮೂರು ಮೊಲೆಯನುಂಡು ಬಂದನ ಎಂಬ ವಚನದ ಟೀಕಿನಲ್ಲಿ ಈ ವಿವರಣೆ ಇದೆ.

"....ಇಂತಪ್ಪ ಶಿವಸತ್ಪಥದಲ್ಲಿ ಆಚರಿಸಿದ ಶರಣನು ಉಪಾಧಿಯ ಫಲಪದಂಗಳ ಜ್ಞಾನಾಗ್ನಿಯಿಂದ ದಹಿಸಿದನೆಂಬುದು ಈಗ **ಪುಣ್ಯಾರಣ್ಯದಹನ** ಎಂಬ ಶಬ್ದಕ್ಕರ್ಥ ಅಂತು ಅಹಂಕರಿಸಿದ ಕಾಲಕಾಮರ ಮರ್ದಿಸಿದನೆಂಬುದೀಗ **ಭೀಮೇಶ್ವರಲಿಂಗ** ಎಂಬ ಶಬ್ದಕ್ಕರ್ಥ. ಅಚಿತ್ ಸ್ವರೂಪನಾದ ಶರಣನು ಚಿದ್ಘನಲಿಂಗಕ್ಕೆ ಚಿತ್ ಪ್ರಭಾಂಗಸ್ವರೂಪನಾದ ಕಾರಣ **ನಿರಂಗಸಂಗಾ** ಎಂಬ ಶಬ್ದಕ್ಕರ್ಥ"

ವಚನಕಾರರ ವಚನಗಳಿಗೆ ಟೀಕೆ ಬರೆದವರು ಅದರಲ್ಲೂ ಬೆಡಗಿನ ವಚನಗಳಿಗೆ ಟೀಕೆ ಬರೆದವರು ವಚನಕಾರರ ನಂತರ ಬಂದವರು ಬೆಡಗಿನ ವಚನಗಳನ್ನು ತಮಗೆ ತೋಚಿದಂತೆ ಅರ್ಥೈಸಿದ್ದಾರೆ. ವಚನಕಾರರು ಅಂಕಿತ ಬಳಸುವಾಗ ಟೀಕಾಕಾರರ ಅರ್ಥವನ್ನು ಹೊಂದಿರಲಾರರು. ಸರಳವಾಗಿ ತಮ್ಮ ಇಷ್ಟದೈವವನ್ನೋ ಕಾಯಕವನ್ನೋ ಅಂಕಿತವನ್ನಾಗಿ ಇಟ್ಟುಕೊಂಡಿದ್ದಾರೆ ಎನ್ನಬಹುದು. ಆದಕಾರಣ ಪುಣ್ಯಾರಣ್ಯದಹನ, ಪುಣ್ಯಾರಣ್ಯದ ಘನ, ಪಾಪಾರಣ್ಯದಹನ ಎಂಬ ಮೂರು ಪಾಠಾಂತರಗಳಲ್ಲಿ ಪಾಪಾರಣ್ಯದಹನ ಎಂಬ ಪಾಠವೇ ಹೆಚ್ಚು ಸೂಕ್ತ ಎನಿಸುತ್ತದೆ; ಅಥವಾ ಪುಣ್ಯಾರಣ್ಯದ ಘನ (೨ ಬಿ ಪಾಠಾಂತರ) ಒಪ್ಪಬಹುದಾಗಿದೆ.

■

# ತೆಲುಗು ಭಾಷೆಯ ಮೊತ್ತಮೊದಲ ಕಂದಪದ್ಯಗಳು: ಪುನರ್ವಿವೇಚನೆ



**ತೆಲುಗು ಮೂಲ : ಡಾ. ಆರ್. ಶೇಷಶಾಸ್ತ್ರಿ ಮತ್ತು ಡಾ. ಜಿ. ಸದಾನಂದಂ**
**ಕನ್ನಡ ಅನುವಾದ : ಎಸ್. ಕಾರ್ತಿಕ್**

[ಇಂದಿನ ತೆಲಂಗಾಣ ರಾಜ್ಯದ] ಕರೀಂನಗರ ಜಿಲ್ಲೆ [ಮತ್ತು ತಾಲ್ಲೂಕಿನಲ್ಲಿರುವ] ಕುರ್ಕ್ಯಾಲ ಗ್ರಾಮಕ್ಕೆ ಸಮೀಪದಲ್ಲಿರುವ ಬೊಮ್ಮಲಮ್ಮಗುಟ್ಟದ ಮೇಲೆ ಇರುವ "ಪಂಪನ ತಮ್ಮ ಜಿನವಲ್ಲಭನ ಶಾಸನ"ವು ಪ್ರಕಟವಾದಂದಿನಂದ ಕನ್ನಡ, ತೆಲುಗು ಭಾಷೆಯ ವಿದ್ವಾಂಸರ ದೃಷ್ಟಿಯನ್ನು ಹಲವು ವಿಧಗಳಲ್ಲಿ ಆಕರ್ಷಿಸಿದೆ[೧]. ಶಾಸನದಲ್ಲಿನ ವಿಷಯ ಮತ್ತು ಸಾಹಿತ್ಯಾಂಶಗಳನ್ನು ಕುರಿತು ತಕ್ಕಮಟ್ಟಿಗೆ ಚರ್ಚೆ ನಡೆದಿದೆ. ಇನ್ನೂ ನಡೆಯುತ್ತಲೇ ಇದೆ. ಈ ಶಾಸನವನ್ನು ಕುರಿತು ಕನ್ನಡದಲ್ಲಿ ಇದುವರೆಗೂ ನಡೆದಿರುವ ಶೋಧನೆಗೆ ಸಂಬಂಧಪಟ್ಟ ಸಂಪ್ರಬಂಧವು ತೆಲುಗು ಭಾಷೆಗೆ ಅನುವಾದಗೊಂಡು ಭಾರತಿ [ಮಾಸ]ಪತ್ರಿಕೆಯಲ್ಲಿ ಪ್ರಕಟವಾಗಿದೆ (ಮೂಲ–ಡಾ. ಎಂ. ಚಿದಾನಂದಮೂರ್ತಿ, ಅನುವಾದ–ಡಾ. ಜಿ.ಎಸ್. ಮೋಹನ್)[೨].

ಈ ಶಾಸನದಲ್ಲಿನ ತೆಲುಗುಭಾಗದ ಪಾಠವಿಷಯದಲ್ಲಿ ಇನ್ನೂ ಚರ್ಚೆ ನಡೆಯಬೇಕಾಗಿದೆ. [ಈ ಪದ್ಯಗಳು ತೆಲುಗು ಭಾಷೆಯ ಲಭ್ಯ ಪ್ರಾಚೀನತಮ ಕಂದಪದ್ಯಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ]. ಈ ದೃಷ್ಟಿಯಿಂದ ಇದುವರೆಗೂ ಪ್ರಕಟವಾಗಿರುವ ಶಾಸನಪಾಠವನ್ನು ಮುಂದಿಟ್ಟುಕೊಂಡು ಸರಿಯಾದ ಪಾಠವನ್ನು ನಿರ್ಣಯಿಸುವ ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಪೂರ್ವಕೃಪಿ**

ಗಂಗಾಧರ ಶಾಸನವನ್ನು ಮೊತ್ತಮೊದಲು ಡಾ. ನೇಲಟೂರು ವೆಂಕಟ ರಮಣಯ್ಯನವರು ೧೯೬೬ರ ಡಿಸೆಂಬರ್‌ನಲ್ಲಿ ಮೈಸೂರಿನಲ್ಲಿ ನಡೆದ ವಿದ್ವದ್ಗೋಷ್ಠಿಯೊಂದರಲ್ಲಿ ಪ್ರಕಟಿಸಿದರು. ಆ ಉಪನ್ಯಾಸದ ಪೂರ್ಣ ತೆಲುಗು ಅನುವಾದವನ್ನು ಅವರೇ ಭಾರತಿ ಪತ್ರಿಕೆಯ ೧೯೬೭ರ ಮಾರ್ಚ್ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಿದರು.

ಈ ಸಂಪ್ರಬಂಧದಲ್ಲಿ ಅವರು ಶಾಸನಕ್ಕೆ ಸುದೀರ್ಘವಾದ ಪೀಠಿಕೆಯನ್ನು ಬರೆದು ಶಾಸನ ಪಾಠವನ್ನು ಕೊಟ್ಟು ಅದರ ಅಡಿಯಲ್ಲಿ ತಮ್ಮ ಪರಿಷ್ಕರಣವನ್ನು, ತಿದ್ದುಪಡಿಗಳನ್ನು ಸೂಚಿಸಿದರು. ಅನಂತರ ಡಾ. ಜಿ.ಎಸ್. ಗಾಯಿ ಅವರು ಅದೇ ಶಾಸನದ ಪಡಿಯಚ್ಚನ್ನು ತೆಗೆದು ೧೯೭೨ರಲ್ಲಿ ವಿವರವಾಗಿ ತಮ್ಮ ಬರಹವನ್ನು ಪ್ರಕಟಿಸಿದರು (ಪ್ರಬುದ್ಧ ಕರ್ನಾಟಕ ೫೩–೪). ಇದರ ನಂತರ ಆಂಧ್ರಪ್ರದೇಶ ಸರ್ಕಾರದ ಪುರಾತತ್ತ್ವ ವಸ್ತುಸಂಗ್ರಹಾಲಯ ಇಲಾಖೆಯವರು ಶ್ರೀ ಪಿ.ವಿ. ಪರಬ್ರಹ್ಮಶಾಸ್ತ್ರಿ ಅವರ ಸಂಪಾದಕತ್ವದಲ್ಲಿ Inscriptions of Andhrapradesh, Karimnagar District ಎನ್ನುವ ಶಾಸನ ಸಂಪುಟದಲ್ಲಿ ಈ ಶಾಸನವನ್ನು ಪ್ರಕಟಿಸಿದ್ದಾರೆ[೩]. ಈ ಒಟ್ಟು ವಿವರ ಗಳನ್ನು ಕೊಟ್ಟಿರುವಲ್ಲಿ ಇರುವ ಮುಖ್ಯೋದ್ದೇಶವೆಂದರೆ ಮೇಲಿನ ಪ್ರಕಟನೆಗಳಲ್ಲಿ ವೈವಿಧ್ಯದಿಂದ ಕೂಡಿದ ಪಾಠಭೇದಗಳು ಇವೆಯೆಂದು ತಿಳಿಸುವುದೇ ಆಗಿದೆ.

ಈ ಶಾಸನವನ್ನು ಪರಿಷ್ಕರಿಸಿದ ವಿದ್ವಾಂಸರೆಲ್ಲರೂ ತಾವು ಓದಿರುವ ಪಾಠಗಳನ್ನೆಲ್ಲಾ ಕೊಟ್ಟಿದ್ದಾರೆ. ಇದರಿಂದ ಈ ಶಾಸನವನ್ನು ಓದುವ ಸಮಯದಲ್ಲಿ ನಮಗೆ ವೈವಿಧ್ಯಮಯ ಪಾಠಗಳನ್ನು ನೋಡುವ ಅವಕಾಶ ಒದಗಿತು. ಪ್ರಸ್ತುತ ಸಂಪ್ರಬಂಧದ ಉದ್ದೇಶ ಈ ಶಾಸನದಲ್ಲಿನ ಮೂರು ತೆಲುಗು ಕಂದಪದ್ಯಗಳನ್ನು ವಿಶ್ಲೇಷಿಸುವುದು. ಇವುಗಳನ್ನು ಯಾರು ಯಾರು ಯಾವ ರೀತಿಯಾಗಿ ಓದಿದ್ದಾರೆ, ಯಾವ ತಿದ್ದುಪಡಿಗಳನ್ನು ಸೂಚಿಸಿದ್ದಾರೆ ಎನ್ನುವುದನ್ನು ಇಲ್ಲಿ ಕೆಳಗೆ ಕೊಡಲಾಗಿದೆ.

**ಡಾ. ನೇಲಟೂರು ವೆಂಕಟರಮಣಯ್ಯ ಅವರ ಪಾಠ**

ಕನ್ದಂ. ಜಿನಭವನಂಬು ಲೆತ್ತಿಂಚುಟ[೧]
ಜಿನಪೂಜಲ್ಸೇಯುಚುನ್ನಿ ಜಿನಮುನುಲಕು ನ
ತ್ತಿನಯನ್ನದಾನಂಬೀವುಟಂ[೨]
ಜಿನವಲ್ಲಭು ಬೋಲಂಗಲರೆ[೩]

ಜಿನಧರ್ಮ್ಮಪರುಲ್

ದಿನಕರುಸರಿವೆಲ್ಗುದುಮನಿ
ಜಿನವಲ್ಲಭುನೆಟ್ಟು ನೆತ್ತು ಜಿತಕವಿನನನು[೪]
ಮನುಜುಲ್ಗಲರೇ ಧಾತ್ರಿಂ
ವಿನಿತಿಚ್ಚುದುನನಿಯ ವೃತ್ತ ವಿಬುಧ ಕವೀಂದ್ರುಲ್

ಒಕ್ಕೊಕ್ಕ ಗುಣಂಬು[೫] ಗಲ್ಗುದು
ರೊಕ್ಕಣ್ಣಂಗಾ[೬] ಕೊಕ್ಕಲ ಕ್ಕಲೇವೆವ್ವರಿಕಿಂ
ಲೆಕ್ಕಿಂಪನೊಕ್ಕ ಲಕ್ಕಕು
ಮಿಕ್ಕಿಲಿ ಗುಣಪಕ್ಷಪಾತಿ ಗುಣಮಣಿ ಗಣಂಬುಲ್[೭]

೧. ಭವನಮುಲೆತ್ತಿಂಚುಟ ಎಂದು ಓದಬೇಕು
೨. ದಾನಮೀವುಟ ಎಂದು ಓದಬೇಕು

೩. **ಬೋಲಂಗಲರೆ** [ಬೋಲ ನಂತರ ಅರ್ಧಾನುಸ್ವಾರ ಮೂಲ ತೆಲುಗು ಲೇಖನದಲ್ಲಿ ಅಚ್ಚಾಗಿದೆ. ಕನ್ನಡ ಲಿಪಿಯಲ್ಲಿ ಇದನ್ನು ಯೋಜಿಸುವುದು ಕಷ್ಟಸಾಧ್ಯ. ಆದುದರಿಂದ ಬೋಲ ನಂತರ ಅರ್ಧಾನುಸ್ವಾರವನ್ನು ಓದಿಕೊಳ್ಳಬೇಕು]–ಅನುವಾದಕ

೪. **ನನನುನ್** ಎಂದು ಓದಬೇಕು

೫. **ಗುಣಮು** ಎಂದು ಓದಬೇಕು

೬. **ಒಕ್ಕಂಡು** [ಒಕ್ಕ ನಂತರ ಅರ್ಧಾನುಸ್ವಾರ ಮೂಲ ತೆಲುಗು ಲೇಖನದಲ್ಲಿ ಅಚ್ಚಾಗಿದೆ. ಕನ್ನಡ ಲಿಪಿಯಲ್ಲಿ ಇದನ್ನು ಯೋಜಿಸುವುದು ಕಷ್ಟಸಾಧ್ಯ. ಆದುದರಿಂದ ಒಕ್ಕ ನಂತರ ಅರ್ಧಾನು ಸ್ವಾರವನ್ನು ಓದಿಕೊಳ್ಳ ಬೇಕು]–ಅನುವಾದಕ

೭. **ಗುಣಮುಲ್** ಎಂದು ಓದಬೇಕು.

**ಡಾ. ಪಿ. ವಿ. ಪರಬ್ರಹ್ಮಶಾಸ್ತ್ರಿ ಅವರ ಪಾಠ**

ಜಿನಭವನಂಬು ಲೆತ್ತಿಂಚುಟ
ಜಿನಪೂಜಲ್ಸೇಯುಚುನ್ನಿ ಜಿನ ಮುನುಲಕು ನ
ತ್ತಿನಯನ್ನದಾನಂಬೀವುಟ
ಜಿನವಲ್ಲಭು ಬೋಲಂಗಲರೆ ಜಿನಧರ್ಮ್ಮ ಪರುಲ್

ದಿನಕರು ಸರಿವೆಲ್ಗುದುಮನಿ
ಜಿನವಲ್ಲಭುನೊಟ್ಟ ನೆತ್ತು ಜಿತಕವಿನನನುಂ
ಮನುಜುಲ್ಗಲರೇ ಧಾತ್ರಿಂ
ವಿನಿತಿಚ್ಚಿದುನನಿಯ ವೃತ್ತ ವಿಬುಧ ಕವೀನ್ದ್ರುಲ್

ಒಕ್ಕೊಕ್ಕೊ ಗುಣಂಬ ಕಲ್ಗುದು
ರೊಕ್ಕೊಂಣ್ಡಿಗಾಕೊಕ್ಕಲಕ್ಕಲೇವೆವ್ವರಿಕಿಂ
ಲೆಕ್ಕಿಂಪನೊಕ್ಕೊಲಕ್ಕಕು
ಮಿಕ್ಕಿಲಿ ಗುಣಪಕ್ಷಪಾತಿ ಗುಣಮಣಿ ಗಣಂಬುಲ್

**ಡಾ. ಜಿ. ಎಸ್. ಗಾಯಿ ಅವರ ಪಾಠ**

ಜಿನಭವನಂಬು ಲೆತ್ತಿಂಚುಟ
ಜಿನಪೂಜಲ್ಸೇಯುಚುನ್ನಿ ಜಿನಮುನುಲಕು ನ
ತ್ತಿನಯನ್ನದಾನಂಬೀವುಟಂ
ಜಿನವಲ್ಲಭುಬೋಲಂಗಲರೆ ಜಿನಧರ್ಮ್ಮಪರುಲ್

ದಿನಕರುಸರಿವೆಲ್ಗುದುಮನಿ ಜಿನವಲ್ಲಭುನೊಟ್ಟ ನೆತ್ತು ಜಿತಕವಿನನನುಂ
ಮನುಜುಲ್ಗಲರೇ ಧಾತ್ರಿಂ
ವಿನಿತಿಚ್ಚಿದುನನಿಯ ವೃತ್ತ ವಿಬುಧ ಕವೀನ್ದ್ರುಲ್

ಒಕ್ಕೊಕ್ಕೊ ಗುಣಂ[ಬು] ಕಲ್ಗುದು
ರೊಕ್ಕೊ(ಕೊ)ಣ್ಡಿಗಾಕೊಕ್ಕೊಲಕ್ಕ ಲೇವೆವ್ವರಿಕಿಂ

ಲೆಕ್ಕಿಂಪನೊಕ್ಕೊಲಕ್ಕು
ಮಿಕ್ಕಿಲಿ ಗುಣಪಕ್ಷಪಾತಿ ಗುಣಮಣಿ ಗಣಂಬುಲ್

ಲಿಪಿಶಾಸ್ತ್ರಾನುಸಾರ ಪರಿಶೀಲಿಸಿದಾಗ ಡಾ. ಜಿ. ಎಸ್. ಗಾಯಿ ಅವರ ಪಾಠವೇ ಹೆಚ್ಚು ಸಮರ್ಥನೀಯವೆಂಬ ತೀರ್ಮಾನಕ್ಕೆ ಮೂಲ ಶಾಸನದ ಪಡಿಯಚ್ಚು ಆಧಾರವಾಗಿದೆ. ಗಾಯಿ ಅವರ ಪಾಠವನ್ನೇ ಕೆಲವು ತಿದ್ದುಪಡಿಗಳೊಡನೆ ನಾವು ಸ್ವೀಕರಿಸಿದ್ದೇವೆ. ಈ ರೀತಿಯಾಗಿ ಪಾಠವನ್ನು ಸ್ವೀಕರಿಸುವಾಗ ನಮ್ಮ ದೃಷ್ಟಿ ಶಾಸನ ಪದ್ಯದ ಮೇಲಿನ ಅರ್ಥಕ್ಕಿಂತ ಲಿಪಿಯ ಮೇಲೆ ಹೆಚ್ಚಾಗಿ ಇದೆಯೆಂದು ಒತ್ತಿ ಹೇಳಬೇಕಾಗಿದೆ.

ಒಂದು ಶಾಸನದಲ್ಲಿ ಹಲವು ಕಾರಣಗಳಿಂದ ತಪ್ಪುಗಳು ತಲೆದೋರುತ್ತವೆ. ಶಾಸನಪಾಠವನ್ನು ಕವಿ ಸಿದ್ಧಪಡಿಸಿ ಅದನ್ನು ಶಾಸನವನ್ನು ಕೆತ್ತುವ ಶಿಲ್ಪಿಗೆ ಕೊಡುತ್ತಾನೆ. ಆ ಶಿಲ್ಪಿ ತಕ್ಕಮಟ್ಟಿಗೆ ವಿದ್ಯಾವಂತನಾಗಿದ್ದರೆ ಕಲ್ಲಿನ ಮೇಲೆ ಕಾಷಾಯವರ್ಣದಿಂದ [=ಕಾವಿ ಬಣ್ಣ] ಸ್ವಯಂ ಬರೆದು ಅದನ್ನು ಅನುಸರಿಸಿ ಅಕ್ಷರಗಳನ್ನು ಕೆತ್ತುತ್ತಾನೆ.

ಈ ರೀತಿ ಅಲ್ಲದಿದ್ದರೆ ಸುಂದರವಾದ ಬರಹವನ್ನು ಹೊಂದಿರುವ ಒಬ್ಬ ಬರಹಗಾರ ಕಲ್ಲಿನ ಮೇಲೆ ಬರೆದ ನಂತರ ಶಿಲ್ಪಿ ಆ ಬಣ್ಣದ ಬರಹದ ಮೇಲೆ ಕೆತ್ತುವುದು ನಡೆಯುತ್ತದೆ. ಈ ಪ್ರಕ್ರಿಯೆಯಲ್ಲಿ ಯಾವುದೋ ಒಂದು ಘಟ್ಟದಲ್ಲಿ ಆಕಸ್ಮಿಕವಾಗಿ ತಪ್ಪುಗಳು ಸಂಭವಿಸುತ್ತವೆ. ಆ ತಪ್ಪುಗಳು ಹೆಚ್ಚು ಅಪಾರ್ಥಗಳಿಗೆ ದಾರಿ ಮಾಡಿದರೆ ಅವುಗಳನ್ನು ತೊಲಗಿಸಿ ಮತ್ತೆ ಬೇರೆ ಬರಹವನ್ನು ಬರೆಯುತ್ತಿದ್ದರು. ಮುಖ್ಯಪಾಠದಲ್ಲಿ ಏನಾದರು ಬಿಟ್ಟುಹೋಗಿದ್ದರೆ ಅಲ್ಲಿ ಹಂಸಪಾದವನ್ನು ಹಾಕಿ ಮತ್ತೊಂದು ಕಡೆ ಕೆತ್ತುತ್ತಿದ್ದರು. ಎಲ್ಲಿಯೋ ಒಂದು ಅಕ್ಷರ ಸ್ಖಾಲಿತ್ಯವೇನಾದರೂ ಇದ್ದರೆ ಅದನ್ನು ಹಾಗೆಯೇ ಬಿಟ್ಟುಬಿಡುತ್ತಿದ್ದರು.

ಈ ಅಂಶಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಶಾಸನಪಾಠವನ್ನು ಪರಿಶೀಲನೆಗೈಯಲಾಗಿದೆ. ಇಲ್ಲಿ ಶಾಸನಕವಿಯ ಮೂಲೋದ್ದೇಶವನ್ನು ಊಹಿಸುವ ಪ್ರಯತ್ನವನ್ನು ಮಾಡಲಾಗಿದೆ.

**ಮೊದಲನೆಯ ಪದ್ಯ**

. ಈ ಶಾಸನಕ್ಕೆ ಸುಮಾರು ೫೦ ವರ್ಷಗಳಷ್ಟು ಹಿಂದಿನದಾದ [ವೆಂಗಿಯ ಚಾಲುಕ್ಯರ] ಯುದ್ಧಮಲ್ಲನ ಬೆಜವಾಡ ಶಾಸನದಲ್ಲಿ[೪] ಪಾಪಬು, ಫಲಬು, ಪಟ್ಟಬು ಎನ್ನುವ ಪದಗಳಲ್ಲಿ ಈಗಿನ 'ಮು' ಗೆ ಬದಲಾಗಿ 'ಬು' ಇದೆ. ಪ್ರಸ್ತುತ ಶಾಸನದಲ್ಲಿ [= ಜಿನವಲ್ಲಭನ ಕುರ್ಕ್ಯಾಲ ಶಾಸನ] ಅಂತಹ ಸ್ಥಳಗಳಲ್ಲಿ 'ಂಬು' ಬರೆಯಲ್ಪಟ್ಟಿದೆ.

'ಜಿನಪೂಜಲ್ಸೇಯುಚುನ್ನಿ' 'ಜಿನಪೂಜಲ್ಸೇಯುಚುನ್ನಿ' ಎಂದು ಎರಡು ರೀತಿಯಾಗಿ ಓದಲಾಗಿದೆ. 'ಎತ್ತಿಂಚುಟ' 'ಈವುಟ' ಎನ್ನುವ ರೂಪಗಳ ಆಧಾರದಿಂದ ಇದು ಕೂಡ ಚೇಯುಚುಂಡುಟ ಎನ್ನುವ ಅರ್ಥದಲ್ಲಿ ಬಳಕೆಯಾಗಿರಬೇಕೆಂದು 'ಚೇಯುಚುನ್ನಿ'

ಎಂದು ಓದಿರಬಹುದು. ಆದರೆ ಮೂಲ ಶಾಸನದ ಪಡಿಯಚ್ಚನ್ನು ಪರಿಶೀಲಿಸಿದರೆ ಅಲ್ಲಿ 'ನ್ಕಿ' ಇರದೆ 'ನ್ನಿ' ರೂಪವೇ ಇರುವುದು ಸ್ಪಷ್ಟವಾಗುತ್ತದೆ.

'ಜಿನಮುನುಲಕು ನತ್ತಿನ ಯನ್ನದಾನಂಬೀವುಟ' ಎಂಬಲ್ಲಿನ 'ನತ್ತಿನ' ಎಂಬ ಪದಕ್ಕೆ ಅರ್ಥ ಏನು ? 'ನ್ + ಅತ್ತಿನ' ಎಂದು ಬಿಡಿಸಬಹುದು. ಅತ್ತು ಎಂದರೆ ಉಂಟಾಗುವುದು, ಕೂಡುವುದು ಎಂದು ನೈಘಂಟುಕಾರ್ಥಗಳಿವೆ. ಜಿನಮುನಿಗಳಿಗೆ ಸಲ್ಲುವ ಇಲ್ಲವೇ ಸಲ್ಲಬೇಕಾದ ಅನ್ನದಾನವನ್ನು ನೀಡುವುದೇ ? "ಜಿನಮುನುಲಕುನೆತ್ತಿನ" ಎಂದು ಓದಿದರೆ ಭಿಕ್ಷೆ ಬೇಡಿ ತಂದ ಅನ್ನ ಎನ್ನುವ ಅರ್ಥ ಬರುತ್ತದೆ. ಆಗ ಜಿನವಲ್ಲಭನು ಭಿಕ್ಷಾರ್ಥಿಯಾಗಿದ್ದನೆ ? ಎಂಬ ಸಂಶಯ ಎದುರಾಗುತ್ತದೆ. ಆತ ಸನ್ಯಾಸಿಯೇ ಎನ್ನುವ ಅನುಮಾನ ಬರುತ್ತದೆ. ಆತ ಸನ್ಯಾಸಿಯಲ್ಲ. ಶಾಸನದ ಸಂಸ್ಕೃತ ಪದ್ಯದಲ್ಲಿ "ಯಾತ್ರಾಯಾತ ಸಮಸ್ತ ಭವ್ಯ ಜನತಾ ಸನ್ಮಾನ ದಾನೋದ್ಯತಂ" ಎನ್ನುವ ಮಾತು ಇದಕ್ಕೆ ಸಾಕ್ಷಿ. "ಜಿನಮುನುಲಕುನ್ ಎತ್ತುನ" ಎಂದು ಓದಬಹುದು. ಆದರೆ 'ಸ್ವಪ್ರಯತ್ನವಾಗಿ', 'ದೊಡ್ಡದಾಗಿ' ಎನ್ನುವ ಅರ್ಥವನ್ನು ಸ್ಫುರಿಸುವಂತೆ ಓದುವುದು ಒಪ್ಪುವಂತಹುದಲ್ಲ. ಶಾಸನದಲ್ಲಿನ ಅಕ್ಷರಗಳನ್ನು ಶಾಸನಕಾರನ ಉದ್ದೇಶಕ್ಕೆ ಹತ್ತಿರವಿರುವಂತೆ, ಸಾಧ್ಯವಿರುವ ಮಟ್ಟಿಗೂ ಕಡಮೆ ಪ್ರಮಾಣದಲ್ಲಿ ಮಾರ್ಪಾಡು ಮಾಡಬಹುದೇ ಹೊರತು, ನಮಗೆ ಬೇಕಾದ ಭಾವವೇ ಬರಬೇಕೆಂದು ಇಷ್ಟಬಂದಂತೆ ತಿದ್ದಿದರೆ ಅದು ನಮ್ಮ ಪದ್ಯವಾಗುತ್ತದೆಯೇ ಹೊರತು ನಾವು ಓದಬೇಕಾದ ಆ ಶಾಸನ ಸ್ವರೂಪವಾಗದು. ಈ ರೀತಿ ಆಲೋಚಿಸುತ್ತಾ ಹೋದರೆ "ಜಿನಮುನುಲಕು ನಚ್ಚಿನ" ಎಂದು ಓದುವುದು ಸರಿಹೊಂದುತ್ತದೆಂದು ತೋರುತ್ತದೆ. ನಚ್ಚು ಎನ್ನುವ ಪದಕ್ಕೆ 'ನಂಬಿಕೆ' ಎನ್ನುವುದು ನೈಘಂಟುಕಾರ್ಥ. ಮೆಚ್ಚು ಎನ್ನುವ ಅರ್ಥವೂ ಇದೆ. ಆಗ ಜಿನಮುನಿಗಳಿಗೆ ಇಷ್ಟವಾದ ಆಹಾರವನ್ನು ಕೊಡುವುದು ಎನ್ನುವ ಅರ್ಥ ಹೊರಡುತ್ತದೆ. ಆದರೆ ಇಷ್ಟವಾದ ಎಂಬ ಅರ್ಥವನ್ನೇ ಏಕೆ ಒಪ್ಪಬೇಕು ಎನ್ನುವ ಪ್ರಶ್ನೆ ಮೂಡುತ್ತದೆ.

ಜಿನಮುನಿಗಳಿಗೆ ಕೆಲವು ಪದಾರ್ಥಗಳು ಅಭೋಜ್ಯಗಳು [=ಭುಜಿಸಲು ನಿಷಿದ್ಧವಾದ, ಊಟಮಾಡಲು ಅರ್ಹವಲ್ಲದ] (ಅತ್ತಿಹಣ್ಣು, ಜೇನು, ಮೊಸರು ಮೊದಲಾದವು). ಆದ್ದರಿಂದ ಭೋಜ್ಯ [=ತಿನ್ನಲು ಯೋಗ್ಯವಾದ] ಪದಾರ್ಥಗಳನ್ನೇ ದಾನ ಮಾಡಿದನೆಂದು ಅರ್ಥ. ದಾನ ಎಂದರೆ ಕೊಡುವುದು. ಹಾಗಾದರೆ ಈವುಟ [=ಕೊಡುವುದು] ಏನು ? ಇಂದು ವ್ಯವಹಾರದಲ್ಲಿ ದಾನಮಿಚ್ಚಿನಾರು [=ದಾನಕೊಟ್ಟಿದ್ದಾರೆ] ಎಂಬ ಪ್ರಯೋಗವಿದೆ. [ಈ ಒಟ್ಟು ವಿಶ್ಲೇಷಣೆಯ ಹಿನ್ನೆಲೆಯಲ್ಲಿ] ಪದ್ಯದ ಭಾವವು ಈ ಕೆಳಗಿನಂತೆ ಇರುತ್ತದೆ.

ಜೈನಬಸದುಲ್ನಿ ನಿರ್ಮಿಂಚಡಂಲೋನು, ಜಿನಪೂಜಲು ಚೇಸ್ತೂವುಂಡೇ ಜಿನಮುನುಲಕು ಇಷ್ಟಮೈನ ಅನ್ನದಾನಂ ಚೇಯಡಂಲೋನು, ಜೈನುಲೆವ್ವರೂ ಜಿನವಲ್ಲಭುನಿ ಪೋಲಲೇರು

[ಜೈನಬಸದಿಗಳನ್ನು ನಿರ್ಮಿಸುವುದರಲ್ಲಿಯೂ, ಜಿನಪೂಜೆಯನ್ನು ಮಾಡುತ್ತಿರುವ ಜಿನಮುನಿಗಳಿಗೆ ಇಷ್ಟವಾದ ಅನ್ನದಾನವನ್ನು ಮಾಡುವುದ ರಲ್ಲಿಯೂ ಜೈನರಾರೂ ಜಿನವಲ್ಲಭನನ್ನು ಹೋಲುವುದಿಲ್ಲ]

**ಎರಡನೆಯ ಪದ್ಯ :**

"ಜಿನವಲ್ಲಭುನೊಟ್ಟನೆತ್ತು ಜಿತಕವಿನನುನ್" ಎಂದರೆ ಜಿನವಲ್ಲಭನ ಪೂರ್ಣಸ್ಥಾಯಿಗೆ ಸಮಾನನಾದ ಜಿತಕವಿ ಎನ್ನುವುದಕ್ಕೆ ಎಂದು ಇದರ ಅರ್ಥ. ಇಲ್ಲಿ ಜಿತಕವಿ ಅಂದರೆ ಜಯಿಂಪಬಡಿನ ಕವುಲು ಕಲವಾಡನಿ [=ಎಲ್ಲ ಕವಿಗಳನ್ನೂ ಜಯಿಸಿದವವನು] ಎಂದರ್ಥ. ಇದಕ್ಕೆ ಜೈನಧರ್ಮ ಪರವಾದ ವಿಶೇಷಾರ್ಥವಿದೆ[೫]. ಜಿನವಲ್ಲಭನು ಜಿತಕವಿ ಎನ್ನಲು ಆತನಗಿರುವ "ವಾಗ್ವಧೂವರವಲ್ಲಭನ್" ಎನ್ನುವ ಕೀರ್ತಿಯೇ ನಿದರ್ಶನ.

'ವಿನಿತಿಚ್ಚಿದುನನಿಯ ವೃತ್ತವಿಬುಧ ಕವೀನ್ದ್ರುಲ್'[೬] ಇದು ವಿನಿತಿಂಚು ದುರನ್ಯವೃತ್ತವಿಬುಧಕವೀನ್ದ್ರುಲ್ ಎನ್ನುವುದರ ವ್ಯಾವಹಾರಿಕ ರೂಪವಾಗಿದೆ. ವಿನತಿಂಚು > ವಿನಿತಿಚ್ಚು, ಅನ್ಯ > ಅನಿಯ ಆಗಿದೆ. ಚೇಯಿಂಚಿ > ಚೇಯಿಚ್ಚಿ , ವ್ರಾಯಿಂಚಿ > ರಾಯಿಚ್ಚಿ , ಇಪ್ಪಿಂಚಿ > ಇಪ್ಪಿಚ್ಚಿ ಇಂತಹ ಪ್ರಯೋಗಗಳು ಇಂದೂ ಬಳಕೆಯಲ್ಲಿವೆ. [ಈ ವಿಶ್ಲೇಷಣೆಯಿಂದ ಹೇಳಬಹುದಾದ] ಪದ್ಯದ ಭಾವವಿದು :

ಸೂರ್ಯುನಿತೋ ಸಮಾನಂಗಾ ವೆಲುಗುತಾಮನೀ, ಜಿನವಲ್ಲಭುನಂತಟಿ ಜಿತಕವಿನನ ಅನದಾನಿಕಿ, ಈ ಭೂಮಿಯಂದೆವರುನ್ನಾರು. ಇತರ ಕವಿ ಸಮೂಹಮು ವಿನಿತಿಂಚುಚುನ್ನದಿ

[ಸೂರ್ಯನಿಗೆ ಸಮಾನವಾಗಿ ಬೆಳಗುತ್ತೇವೆಂದೂ ಜಿನವಲ್ಲಭನಂತಹ ಜಿತಕವಿ ನಾನೆಂದು ಹೇಳುವುದಕ್ಕೆ ಈ ಭೂಮಿಯಲ್ಲಿ ಯಾರಿದ್ದಾರೆ ? ಎಂದು ಇತರ ಕವಿ ಸಮೂಹವು ಸ್ತುತಿಸುತ್ತದೆ]

**ಮೂರನೆಯ ಪದ್ಯ :**

ಒಕ್ಕೊಕ್ಕೊ ಎನ್ನುವುದು ಒಕ್ಕೊಕ್ಕ ಎನ್ನುವುದರ ಒಂದು ರೂಪವೇ ಆಗಿದೆ. ಲಕ್ಷ > ಲಕ್ಕ ಆಗಿದೆ. ಒಕ್ಕೊಣ್ಡಿಗಾ ಎಂಬುದನ್ನು ಒಕ್ಕೊಡುಗಾ ಎಂದು ಓದಿಕೊಳ್ಳಬೇಕು. ಗುಣಪಕ್ಷಪಾತಿ ಎನ್ನುವುದು ಜಿನವಲ್ಲಭನನ್ನು ಸೂಚಿಸುತ್ತದೆ. [ಇದರ ಆಧಾರದಿಂದ ತಿಳಿಯಬಹುದಾದ] ಪದ್ಯದ ಭಾವ[ವಿಂತಿದೆ] :

ಒಕ್ಕೊಕ್ಕಡೊಕ್ಕ ಗುಣಮುನು ಕಲಿಗಿವುಂಟಾರು ಗಾನ ಒಕ ಲಕ್ಷಗುಣಾಲೆವನಕಿ ಲೇಪು. ಲೆಕ್ಕಿಸ್ತೆ ಗುಣಪಕ್ಷಪಾತಿ ಗುಣಮಣಿಗಣಾಲು ಲಕ್ಷಕು ಪೈಬಡಿ ವುನ್ನಾಯಿ

[ಒಬ್ಬೊಬ್ಬರು ಒಂದೊಂದು ಗುಣವನ್ನು ಹೊಂದಿರುತ್ತಾರೆಯೇ ಹೊರತು ಒಂದು ಲಕ್ಷಗುಣಗಳು ಯಾರಿಗೂ ಇರುವುದಿಲ್ಲ. ಲೆಕ್ಕ ಮಾಡಿದರೆ ಗುಣಪಕ್ಷಪಾತಿ ಗುಣಮಣಿ ಗಣಗಳು ಲಕ್ಷಕ್ಕೂ ಮೇಲ್ಪಟ್ಟು ಇವೆ]

ಈ ಶಾಸನವು ತೆಲುಗುನಾಡಿನ ಭಾಷಾಜಾಯಮಾನದ ದೃಷ್ಟಿಯಿಂದ ಬಹಳ ಮುಖ್ಯವಾದುದೆನಿಸಿಕೊಳ್ಳುತ್ತದೆ. ಸಂಸ್ಕೃತ, ಕನ್ನಡ, ತೆಲುಗು ಈ ಮೂರು ಭಾಷೆಗಳಲ್ಲಿಯೂ ಈ ಶಾಸನ ರಚಿತವಾಗಿದೆ. ಶಾಸನದಲ್ಲಿ ಈ ಭಾಷೆಗಳು ಒಂದು ಕ್ರಮದಲ್ಲಿವೆ. ಅಲ್ಲಿಗೆ [= ಶಾಸನವಿರುವ ಸ್ಥಳಕ್ಕೆ] ಬಂದ ಜೈನಯತಿಗಳು ಭಾರತದ ನಾನಾ ಪ್ರಾಂತಗಳಿಂದ ಬಂದವರು. ಇವರ ಸಾಮಾನ್ಯ ಭಾಷೆ (Common Language) ಸಂಸ್ಕೃತ. ಆದುದರಿಂದ ಅವರು ಪರಸ್ಪರ ಸಂಸ್ಕೃತದಲ್ಲಿ ಮಾತನಾಡಿಕೊಂಡಿದ್ದಾರೆ (ಅನೇಕ ಜೈನಮುನಿಗಳು ಸಂಸ್ಕೃತ ಕವಿಗಳಾಗಿ ಪ್ರಸಿದ್ಧರಾಗಿದ್ದಾರೆ). ಜಿನವಲ್ಲಭನ ಮಾತೃಭಾಷೆ, ಆ ಪ್ರದೇಶದ ರಾಜಭಾಷೆ ಕನ್ನಡವಾದ ಕಾರಣ ಶಾಸನ ವಿಷಯವು ಕನ್ನಡದಲ್ಲಿದೆ. ನಮ್ಮ ಈ ಅಭಿಪ್ರಾಯವನ್ನು

ಕರೀಂನಗರ ಜಿಲ್ಲೆಯಲ್ಲಿ ದೊರೆತಿರುವ ಅನೇಕ ಕನ್ನಡ ಶಾಸನಗಳು ಸಮರ್ಥಿಸುತ್ತವೆ. ಅಕ್ಕಪಕ್ಕದಲ್ಲಿರುವ ಜನಸಾಮಾನ್ಯರು ಮಾತನಾಡುವ ಭಾಷೆ ತೆಲುಗು. ಆ ಜನ ಜಿನವಲ್ಲಭನ ಗುಣಗಣಗಳನ್ನು ತೆಲುಗಿನಲ್ಲಿಯೇ ಹೊಗಳಿದ್ದಾರೆ. ಶಾಸನಕವಿ ಅವರ ಮಾತುಗಳನ್ನು ಅವರ ಭಾಷೆ ಯಲ್ಲಿಯೇ ಹಿಡಿದು ವ್ಯಕ್ತೀಕರಿಸಿದ್ದಾನೆ. ಈ ಕಾರಣದಿಂದಲೇ ಈ ಶಾಸನದಲ್ಲಿರುವ ಕಂದಪದ್ಯಗಳಲ್ಲಿ ತೆಲುಗಿನ ಪಾಲು ಹೆಚ್ಚಾಗಿಯೇ ಇದೆ. ಇರುವ ಸಂಸ್ಕೃತ ಪದಗಳು ಕೂಡ ತೆಲುಗು ಪದಗಳೇ ಎನ್ನುವಂತೆ ಸರಳವಾಗಿ ಇವೆ. ಜಟಿಲವಾದ ಸಂಸ್ಕೃತ ಸಮಾಸ ವಿನ್ಯಾಸವಿಲ್ಲ. ಶಾಸನದ ಆರಂಭದಲ್ಲಿರುವ ಸಂಸ್ಕೃತ ಶ್ಲೋಕವನ್ನು ಬರೆದ ಕವಿಯೇ ಈ ತೆಲುಗು ಪದ್ಯಗಳನ್ನೂ ಬರೆದಿರುವ ಅಂಶವನ್ನು ಸ್ಮರಿಸಿಕೊಂಡಾಗ, ಆ ಕವಿ ಸಾಮಾನ್ಯ ಜನರ ಮಾತುಗಳನ್ನು ಎಷ್ಟು ಚೆನ್ನಾಗಿ ಉಪಯೋಗಿಸಿಕೊಂಡಿದ್ದಾನೆ ಎಂಬುದು ತಿಳಿಯುತ್ತದೆ. ಜೊತೆಗೆ ಹೇಳಬಹುದಾದ ಮತ್ತೊಂದು ವಿಷಯವೇನೆಂದರೆ, ಈ ಕಂದಪದ್ಯಗಳು, ಕನ್ನಡ ಪದ್ಯಗಳು ಹೆಚ್ಚಾಗಿ ಕಾವ್ಯಪ್ರಯೋಗಗಳನ್ನು, ಬಳಕೆವಾತಿನ ಶೈಲಿಯನ್ನು ಹೊಂದಿವೆ[೭]. ಅಂದ ಮಾತ್ರಕ್ಕೆ ಅವುಗಳ ರಚನಾಬಂಧ ಪೇಲವವೆಂದು ಅರ್ಥವಲ್ಲ. ಈ ಭಾಷಾತ್ರಯ ಪ್ರಯೋಗವು (ಸಂಸ್ಕೃತ, ತೆಲುಗು, ಕನ್ನಡದಲ್ಲಿ ಶಾಸನದ ರಚನೆಯಾಗಿದೆ) ಒಂದು ರೀತಿಯಲ್ಲಿ ಶಾಸನ ಕವಿಗಿರುವ ಔಚಿತ್ಯ ಪ್ರಜ್ಞೆಯನ್ನು ಸ್ಪಷ್ಟಪಡಿಸುತ್ತದೆ[೮].

## ಟಿಪ್ಪಣಿಗಳು

೧. [ಈ ಲೇಖನದಲ್ಲಿ ಚೌಕ ಕಂಸಗಳಲ್ಲಿರುವ ಭಾಗವೆಲ್ಲವೂ (ಟಿಪ್ಪಣಿಗಳ ಭಾಗದಲ್ಲಿನದೂ ಸೇರಿ) ಮೂಲ ಲೇಖನದ ವಸ್ತು, ವಿಷಯ, ಆಶಯಕ್ಕೆ ಧಕ್ಕೆಯೊದಗದಂತೆ ಪೂರಕ ಮಾಹಿತಿಯ ದೃಷ್ಟಿಯಿಂದ ಪ್ರಕೃತ ಅನುವಾದಕನ ಸೇರ್ಪಡೆಯಾಗಿರುತ್ತದೆ. ಇದಲ್ಲದೆ ಅನುವಾದಕ ಎಂಬ ಸೂಚನೆಯೊಂದಿಗೆ ಇರುವ ವಿವರವೂ ಪ್ರಕೃತ ಅನುವಾದಕನ ಸೇರ್ಪಡೆಯೇ ಆಗಿದೆ. ಮೂಲ ಲೇಖನದಲ್ಲಿರುವ ಅಡಿಟಿಪ್ಪಣಿಗಳನ್ನು ಯಥಾವತ್ತಾಗಿ ಅನುವಾದಿಸಲಾಗಿದೆ. ಇವುಗಳಿಗೆ ಯಾವುದೇ ಸೂಚನೆಯನ್ನೂ ನೀಡಿಲ್ಲ. ಇಂತಹವು ಮೂಲ ಲೇಖನದ ಭಾಗಗಳೆಂದು ತಿಳಿಯಬೇಕು. ಈ ಲೇಖನವನ್ನು ಅನುವಾದಿಸಲು ಮತ್ತು ಪ್ರಕಟಿಸಲು ಅನುಮತಿ ನೀಡಿರುವ ಡಾ. ಆರ್. ಶೇಷಶಾಸ್ತ್ರಿ ಮತ್ತು ಡಾ. ಜೆ. ಸದಾನಂದಂ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ–ಅನುವಾದಕ]

೨. [ಕರೀಂನಗರ ಜಿಲ್ಲಾಲೋನಿ ಪಂಪಮಹಾಕವಿ ಸೋದರುನಿ ಜಿನವಲ್ಲಭುಡಿ ಶಾಸನಂ : ಮರಿಕೊನ್ನಿ ಪರಿಶೋಧನಾಂಶಾಲು-(ಕನ್ನಡ ಮೂಲಂ-ಡಾ. ಎಂ. ಚಿದಾನಂದಮೂರ್ತಿ), ಆಂಧ್ರಾನುವಾದಂ-ಡಾ. ಜಿ.ಎಸ್. ಮೋಹನ್, ಭಾರತಿ, ಸಂಪುಟ-೬೩, ಸಂಚಿಕೆ-೩, ಮಾರ್ಚ್, ಪುಟ ೩೪-೩೯; ೪೫-೪೬, ೧೯೮೬]

೩. [ಈ ಶಾಸನವನ್ನು ಮತ್ತು ಜಿನವಲ್ಲಭನನ್ನು ಕುರಿತು ಪ್ರಕಟವಾಗಿರುವ ಸಂಪ್ರಬಂಧಗಳ ಹಾಗೂ ಸಂಬಂಧಿತ ಬರಹಗಳ ಒಟ್ಟು ಮಾಹಿತಿಯನ್ನು ನಮ್ಮ ಗಮನಕ್ಕೆ ಬಂದಮಟ್ಟಿಗೂ ಆಯಾ ಮೂಲಗಳನ್ನೇ ಪರಿಶೀಲಿಸಿ ಅನುಬಂಧದಲ್ಲಿ ನೀಡಲಾಗಿದೆ. ಈ ಸಂಪ್ರಬಂಧಗಳ ಮರುಮುದ್ರಣಗಳ ಮಾಹಿತಿಯನ್ನು ಸಹ ನೀಡಲಾಗಿದ್ದು, ಆಯಾ ಸಂಪ್ರಬಂಧದ ಪ್ರಥಮ ಪ್ರಕಟನೆ ಮತ್ತು ಮರುಮುದ್ರಣಗಳ ವರ್ಷಾನುಸಾರಿಯಾಗಿ ದಾಖಲಿಸಲಾಗಿದೆ]-(ಅನುವಾದಕ)

೪. [ಪ್ರಾಚೀನಾಂಧ್ರ ಶಾಸನಾಲು-ಬೂದರಾಜು ರಾಧಾಕೃಷ್ಣ, ಆಂಧ್ರಪ್ರದೇಶ್ ಸಾಹಿತ್ಯ ಅಕಾಡೆಮಿ, ಹೈದರಾಬಾದ್-೧೯೭೧, ಶಾಸನ ಸಂಖ್ಯೆ-೮೯, ಪುಟ ೭೧-೭೪]

೫. ಜಿತ : ಶ್ರುತಭೇದಂ -ತಡವರಿಸದೆ ಅಸ್ಖಲಿತವಾಗಿ ಭಾವರೂಪ ಆಗಮದಲ್ಲಿ ಸಂಚಾರಿಯಾಗಿರುವ ಪುರುಷ

ಜಿತಾಗಮಂ : ಭಾವಾಗಮದಲ್ಲಿ ಅಸ್ಖಲಿತವಾಗಿ ಇರುವಂತಹವನು. ಆತ ಹೇಳಿದ ಭಾವಾಗಮ

ಆಗಮ : ಬಹುಪ್ರಾಚೀನವಾದ ಜೈನಗ್ರಂಥ ಸಮೂಹ. ಇದರಲ್ಲಿ ಎರಡು ಭೇದಗಳಿವೆ. (೧) ದ್ರವ್ಯಾಗಮ-ಶಬ್ದಾತ್ಮಕವಾದ್ದು (೨) ಭಾವಾಗಮ-ಜ್ಞಾನಾತ್ಮಕವಾದ್ದು

೬ [ಈ ಸಾಲಿನಲ್ಲಿರುವ ವೃತ್ತವಿಬುಧ ಎಂಬ ಪಾಠ ಸರಿಯಲ್ಲವೆಂದು, ಶಾಸನ ಮೂಲದಲ್ಲಿ ವತ್ರವಿಬುಧ ಎಂಬ ಪಾಠವಿದ್ದು ಎನ್. ವೆಂಕಟರಮಣಯ್ಯ ಮತ್ತು ಜಿ.ಎಸ್. ಗಾಯಿ ಅವರುಗಳು ವೃತ್ತವಿಬುಧ ಎಂದು ತಪ್ಪಾಗಿ ಓದಿದ್ದಾರೆಂದು ಸೀತಾರಾಮ ಜಾಗೀರ್‌ದಾರ್ ಅವರು ಬರೆದಿದ್ದಾರೆ. ನೋಡಿ : ಜಿನವಲ್ಲಭನ ವೃಷಭಾದ್ರಿಯ ಶಿಲಾಶಾಸನ, ಸಾಪೇಕ್ಷ, (ಪಂಪನನ್ನು ಕುರಿತ ವಿಮರ್ಶಾತ್ಮಕ ಸಂಪ್ರಬಂಧಗಳು), ಅತ್ತಿಮಬ್ಬೆ ಪ್ರಕಾಶನ, ಮೈಸೂರು-೨೦೦೦, ಪರಿಷ್ಕೃತ ೨ ನೆಯ ಆವೃತ್ತಿ, ಪುಟ ೫೯ರಲ್ಲಿನ ಅಡಿಟಿಪ್ಪಣಿ]

೭. [ಈ ತೆಲುಗು ಕಂದಪದ್ಯಗಳ ಛಂದಸ್ಸಿನ ಬಗೆಗೆ ಎರಡು ಮಾತುಗಳನ್ನು ಹೇಳಬೇಕು. ಜಿನಭವನಂಬುಲೆತ್ತಿಂಚುಟ, ಒಕ್ಕೊಕ್ಕೊ ಗುಣಂಬು ಎಂದು ಆರಂಭವಾಗುವ ಕಂದಪದ್ಯಗಳು ಛಂದಸ್ಸಿಗೆ ಸಮರ್ಪಕವಾಗಿ ಹೊಂದುವುದಿಲ್ಲ. ದಿನಕರುಸರಿ ಎನ್ನುವ ಕಂದಪದ್ಯದಲ್ಲಿ ಛಂದಸ್ಸಿನ ಸಮಸ್ಯೆಯೇನೂ ಇಲ್ಲ. ವಡಿಯ ಪಾಲನೆಯೂ ಆಗಿದೆ. ಛಂದಸ್ಸಿಗೆ ಹೊಂದದ ಕಂದಪದ್ಯಗಳ ಪಾಠಗಳನ್ನು ಕೆಳಗಿನ ಸೂಚನೆಗಳನ್ನು ಅನುಸರಿಸಿ ಓದಿಕೊಳ್ಳಬೇಕು.

(ಅ) ಜಿನಭವನಂಬುಲೆತ್ತಿಂಚುಟ ಎಂದು ಆರಂಭವಾಗುವ ಕಂದಪದ್ಯದಲ್ಲಿ ೨, ೧೦, ೧೧, ೧೪ ನೆಯ ಗಣ ಸ್ಥಾನಗಳಲ್ಲಿ ಇರುವ ಅನುಸ್ವಾರಕ್ಕೆ ಬದಲಾಗಿ ತೆಲುಗು ಭಾಷೆಯ ಮರ್ಯಾದೆಗೆ ಅನುಗುಣವಾಗಿ ಅರ್ಧಾನುಸ್ವಾರವನ್ನು ಯೋಜಿಸಬೇಕು. ಈ ಪದ್ಯದಲ್ಲಿ ವಡಿಯನ್ನು ಪಾಲಿಸಿದೆ.

(ಆ) ಒಕ್ಕೊಕ್ಕೊ ಗುಣಂಬು ಎಂದು ಆರಂಭವಾಗುವ ಕಂದಪದ್ಯದ ೨, ೧೬ ನೆಯ ಗಣಸ್ಥಾನಗಳಲ್ಲಿ ಅನುಸ್ವಾರಕ್ಕೆ ಬದಲಾಗಿ ಅರ್ಧಾನುಸ್ವಾರವನ್ನು ಯೋಜಿಸಬೇಕು. ಈ ಪದ್ಯದಲ್ಲಿ ವಡಿಯನ್ನು ಉಲ್ಲಂಘಿಸಲಾಗಿದೆ]

೮. [ಮೂಲ ಲೇಖನವು 'ಮೊಟ್ಟಮೊದಟಿ ಕಂದಪದ್ಯಾಲು : ಪುನರ್ವಿವೇಚನ' ಎಂಬ ಶೀರ್ಷಿಕೆಯಲ್ಲಿ ಹೈದರಾಬಾದಿನ ತೆಲುಗು ವಿಶ್ವವಿದ್ಯಾಲಯದ Journal of Telugu Studies (Vol-1, No-1, April, 1988, pp 142-146) ಪತ್ರಿಕೆಯಲ್ಲಿ ಪ್ರಕಟವಾಗಿದೆ]-(ಅನುವಾದಕ)

## ಅನುಬಂಧ

ಇಲ್ಲಿ ನೀಡಿರುವ ವಿವರಗಳು ಕ್ರಮ ಸಂಖ್ಯೆ, ಲೇಖನದ / ಶಾಸನದ ಹೆಸರಿನ ಶೀರ್ಷಿಕೆ, ಶಾಸನದ ಸಂಪಾದಕರು/ಲೇಖಕರು, ಪ್ರಕಟನೆ ಮತ್ತು ಮರು ಪ್ರಕಟನೆಯ ಆಕರಗಳು ಮತ್ತು ಪುಟ ಸಂಖ್ಯೆ, ಪ್ರಕಟಿತ ವರ್ಷ, ಪ್ರಕಾಶಕರು ಮತ್ತು ಸ್ಥಳ-ಈ ಅನುಕ್ರಮದಲ್ಲಿವೆ.

೧. ಜಿನವಲ್ಲಭುನಿ ಗಂಗಾಧರಂ ಶಿಲಾಶಾಸನಮು, ಎನ್. ವೆಂಕಟರಮಣಯ್ಯ, ಭಾರತಿ, ಸಂಪುಟ-೪೪, ಸಂಚಿಕೆ-೩, ಮಾರ್ಚ್, ಪುಟ ೧೦-೨೩, ೧೯೬೭.

ಪಲ್ಲವುಲು-ಚಾಲುಕ್ಯುಲು (ಚಾರಿತ್ರಕ ವ್ಯಾಸಮುಲು), ಪುಟ ೨೫೭-೨೮೨, ೧೯೬೯, ವೇದಮು ವೇಂಕಟರಾಯಶಾಸ್ತ್ರೀ ಅಂಡ್ ಬ್ರದರ್ಸ್, ಮದ್ರಾಸ್-೧.

೨. ಪಂಪನ ತಮ್ಮ ಜಿನವಲ್ಲಭನ ಶಾಸನ, ಎಂ. ಚಿದಾನಂದಮೂರ್ತಿ, ಪ್ರಬುದ್ಧ ಕರ್ಣಾಟಕ ೪೮-೪, ಪುಟ ೨೪೮-೨೪೯ (ವಸ್ತುಕೋಶ), ೧೯೬೭, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಪಂಪನನ್ನು ಕುರಿತು ಒಂದು ಅಪೂರ್ವ ಶಾಸನ, ಆರ್.ಸಿ. ಹಿರೇಮಠ, Journal of Karnatak University (Humanities), Volume-11, pp 107-110, ೧೯೬೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಆದಿಪಂಪನ ಜೀವನ ಚರಿತ್ರೆಯಲ್ಲಿಯ ಕೆಲವು ಸಮಸ್ಯೆಗಳು, ವೀ. ಜಿ. ಕುಲಕರ್ಣಿ, Journal of Karnatak University (Humanities), Volume-11, pp 73-86, ೧೯೬೭. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ಜಿನವಲ್ಲಭನ ಗಂಗಾಧರದ ಶಿಲಾಶಾಸನ, ಎನ್. ವೆಂಕಟರಮಣಯ್ಯ (ಕನ್ನಡ ಅನುವಾದ -ಸೀತಾರಾಮ ಜಾಗೀರದಾರ್), ಪ್ರಬುದ್ಧ ಕರ್ಣಾಟಕ ೫೦-೩, ಪುಟ ೨೩-೪೧, ೧೯೬೮, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬ ಜಿನವಲ್ಲಭನ ಗಿರಿ ಶಾಸನ, ಪಿ.ಬಿ. ದೇಸಾಯಿ, ಕನ್ನಡ ನುಡಿ ೩೧-೩, ಮಾರ್ಚ್, ಪುಟ ೯-೧೧ ; ಕನ್ನಡ ನುಡಿ ೩೧-೪, ೫, ಪುಟ ೧೯-೨೨, ೧೯೬೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ಗಂಗಾಧರಂ ಶಾಸನ : ಒಂದು ತಿದ್ದುಪಡಿ, ಎಂ.ಎಂ. ಕಲಬುರ್ಗಿ, ಕನ್ನಡ ನುಡಿ ೩೧-೪,೫, ಪುಟ ೨೩-೨೪, ೧೯೬೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶಾಸನ ವ್ಯಾಸಂಗ, ಸಂಪುಟ-೨, ಪುಟ ೨೦-೨೩, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಾರ್ಗ, ಸಂಪುಟ-೨, ಪುಟ ೫೧-೫೪, ೧೯೯೮, ನರೇಶ್ ಅಂಡ್ ಕಂಪೆನಿ, ಬೆಂಗಳೂರು.

ಪಂಪನ ಅಧ್ಯಯನಗಳು {ಪಂಪನನ್ನು ಕುರಿತ ಡಾ. ಎಂ. ಎಂ. ಕಲಬುರ್ಗಿಯವರ ಪ್ರಬಂಧಗಳ ಸಂಕಲನ}-(ಸಂ) ಎನ್. ಎಸ್. ತಾರಾನಾಥ, ಪುಟ ೩೮-೪೦, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೮. ತಿದ್ದುಪಡಿಯ ಗಡಿಬಿಡಿ ಗಂಗಾಧರಂ ಶಾಸನ, ಪಿ.ಬಿ. ದೇಸಾಯಿ, ಕನ್ನಡ ನುಡಿ ೩೧-೮, ಆಗಸ್ಟ್, ಪುಟ ೩, ೧೯೬೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. ಅಬ್ಬಣಬ್ಬೆ ಮಗಳಲ್ಲ, ಮೊಮ್ಮಗಳು, ಎಂ.ಎಂ. ಕಲಬುರ್ಗಿ, ಕನ್ನಡನುಡಿ ೩೨-೨, ಫೆಬ್ರುವರಿ, ಪುಟ ೨೫-೨೬, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶಾಸನ ವ್ಯಾಸಂಗ, ಸಂಪುಟ-೨, ಪುಟ ೨೪-೨೬, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಾರ್ಗ, ಸಂಪುಟ-೨, ಪುಟ ೫೫-೫೭, ೧೯೯೮, ನರೇಶ್ ಅಂಡ್ ಕಂಪೆನಿ, ಬೆಂಗಳೂರು.

ಪಂಪನ ಅಧ್ಯಯನಗಳು, ಪುಟ ೪೧-೪೩, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೧೦. ಗಂಗಾಧರಂ ಶಾಸನ : ಕೈಗೆ ಕನ್ನಡಿ, ಪಿ.ಬಿ. ದೇಸಾಯಿ, ಕನ್ನಡ ನುಡಿ ೩೨-೪,೫, ಏಪ್ರಿಲ್-ಮೇ, ಪುಟ ೧೧-೧೩, ೧೯೬೯., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧. ಜಿನವಲ್ಲಭನ ಗಂಗಾಧರಂ ಶಾಸನವನ್ನು ಕುರಿತು ಓದುಗನೊಬ್ಬನ ಪ್ರಶ್ನೆಗಳು, ಸೀತಾರಾಮ ಜಾಗೀರದಾರ್, ಕನ್ನಡ ನುಡಿ ೩೨-೪,೫, ಏಪ್ರಿಲ್-ಮೇ, ಪುಟ ೧೪-೧೫, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಗಂಗಾಧರಂ ಶಾಸನ : ಒಂದು ಉತ್ತರ, ಎಂ.ಎಂ. ಕಲಬುರ್ಗಿ, ಕನ್ನಡ ನುಡಿ ೩೨-೬,೭, ಜೂನ್-ಜುಲೈ, ಪುಟ ೭-೮, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶಾಸನ ವ್ಯಾಸಂಗ, ಸಂಪುಟ-೨, ಪುಟ ೨೭-೨೯, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಾರ್ಗ, ಸಂಪುಟ-೨, ಪುಟ ೫೮-೬೧, ೧೯೯೮, ನರೇಶ್ ಅಂಡ್ ಕಂಪೆನಿ, ಬೆಂಗಳೂರು.

ಪಂಪನ ಅಧ್ಯಯನಗಳು, ಪುಟ ೪೪-೪೬, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೧೩. ಮಮ್ಮಳಬ್ಬಣಬ್ಬೆಯೋ, ಮಮ್ಮವಬ್ಬಣಬ್ಬೆಯೋ?, ಜಿ.ಎಸ್. ಗಾಯಿ, ಕನ್ನಡನುಡಿ ೩೨-೮, ಆಗಸ್ಟ್, ಪುಟ ೧೯-೨೦, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಜಿ.ಎಸ್. ಗಾಯಿ ಅವರ ಸಂಶೋಧನ ಲೇಖನಗಳು-(ಸಂ) ಟಿ.ವಿ. ವೆಂಕಟಾಚಲಶಾಸ್ತ್ರೀ, ಪುಟ ೯೧-೯೩, ೨೦೧೦, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೧೪. ಗಂಗಾಧರಂ ಶಾಸನ-ಒಂದು ಟಿಪ್ಪಣಿ, ಪಾ.ವೆಂ. ಆಚಾರ್ಯ, ಕನ್ನಡ ನುಡಿ ೩೨-೯, ಸೆಪ್ಟೆಂಬರ್, ಪುಟ ೧೩, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೫. ಪಂಪನ ತಮ್ಮ ಜಿನವಲ್ಲಭನ ಶಿಲಾಶಾಸನ, ಜಿ.ಎಸ್. ಗಾಯಿ, ಪ್ರಬುದ್ಧ ಕರ್ಣಾಟಕ ೫೦-೪, ಪುಟ ೧೧೫-೧೭, ೧೯೬೯, ಮೈಸೂರು ವಿಶ್ವವಿದ್ಯಾನಿಲಯ.

ಜಿ.ಎಸ್. ಗಾಯಿ ಅವರ ಸಂಶೋಧನ ಲೇಖನಗಳು-(ಸಂ) ಟಿ.ವಿ. ವೆಂಕಟಾಚಲಶಾಸ್ತ್ರೀ, ಪುಟ ೮೩-೮೬, ೨೦೧೦, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೧೬. ಗಂಗಾಧರಂ ಶಾಸನ : ಕೆಲವು ಹೊಸ ವಿಚಾರಗಳು, ಎಂ.ಎಂ. ಕಲಬುರ್ಗಿ, ಕನ್ನಡನುಡಿ ೩೨-೧೧, ನವೆಂಬರ್, ಪುಟ ೭-೯, ೧೯೬೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶಾಸನ ವ್ಯಾಸಂಗ, ಸಂಪುಟ–೨, ಪುಟ ೩೦–೩೭, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮಾರ್ಗ, ಸಂಪುಟ–೨, ಪುಟ ೬೧–೬೮, ೧೯೯೮, ನರೇಶ್ ಅಂಡ್ ಕಂಪೆನಿ, ಬೆಂಗಳೂರು.

ಪಂಪನ ಅಧ್ಯಯನಗಳು, ಪುಟ ೪೭–೫೪, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೧೭. {ಪಂಪನ ಬಗೆಗೆ ಸಂಶೋಧನ ಯಾತ್ರೆ}, ಎಂ.ಎಂ. ಕಲಬುರ್ಗಿ, ಕರ್ಮವೀರ ೨೪–೫–೧೯೭೦, ಪುಟ ೧೯–೨೧, ೧೯೭೦.

ಪಂಪನ ಧರ್ಮಪುರ : ಕ್ಷೇತ್ರಕಾರ್ಯ, ಮಾರ್ಗ, ಸಂಪುಟ–೧, ಪುಟ ೪೦–೪೫, ೧೯೯೫, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ಪರಿಷ್ಕೃತ ದ್ವಿತೀಯ ಮುದ್ರಣ.

ಪಂಪನ ಅಧ್ಯಯನಗಳು, ಪುಟ ೩೧–೩೭, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೧೮. ಪಂಪನ ತಮ್ಮ ಜಿನವಲ್ಲಭನ ಶಿಲಾಶಾಸನ, ಪ್ರಬುದ್ಧ ಕರ್ಣಾಟಕ ೫೩–೪, ಪುಟ ೭೩–೮೩, ೧೯೭೨, ಮೈಸೂರು ವಿಶ್ವವಿದ್ಯಾನಿಲಯ.

ಶತಮಾನದ ಸಂಶೋಧನೆ (ಸಂ) ಎನ್. ಎಸ್. ತಾರಾನಾಥ, ಪುಟ ೨೯–೪೧, ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಜಿ.ಎಸ್. ಗಾಯಿ ಅವರ ಸಂಶೋಧನ ಲೇಖನಗಳು–(ಸಂ) ಟಿ.ವಿ. ವೆಂಕಟಾಚಲಶಾಸ್ತ್ರೀ, ಪುಟ ೯೪–೧೧೦, ೨೦೧೦, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೧೯. ಗಂಗಾಧರ ಶಾಸನ, ಎಸ್.ಎಸ್. ಜಾಗೀರ್‌ದಾರ್ [=ಸೀತಾರಾಮ ಜಾಗೀರ್‌ದಾರ್], ಕನ್ನಡ ವಿಶ್ವಕೋಶ, ಸಂಪುಟ–೫, ಪುಟ ೮೬೯–೮೭೦, ೧೯೭೨, ಮೈಸೂರು ವಿಶ್ವವಿದ್ಯಾನಿಲಯ.

೨೦. ಜಿನವಲ್ಲಭನ ಕುರ್ಕ್ಯಾಲ ಶಾಸನದ ಅರ್ಥ, ಟಿ.ವಿ. ವೆಂಕಟಾಚಲ ಶಾಸ್ತ್ರೀ, Jainism: A Study, (Ed) T.G. Kalghatgi, pp 121-127, ೧೯೭೬, ಮೈಸೂರು ವಿಶ್ವವಿದ್ಯಾನಿಲಯ.

ಶಬ್ದಾರ್ಥ ವಿಹಾರ, ಪುಟ ೨೩–೩೨, ೧೯೭೯, ಅಪರ್ಣಾ ಪ್ರಕಾಶನ, ಮೈಸೂರು.

ಶಾಸ್ತ್ರೀಯ–೧, ಪು.೨೫೫–೨೬೩, ೧೯೯೯, ಸಪ್ನ ಬುಕ್ ಹೌಸ್, ಬೆಂಗಳೂರು.

೨೧. ಪಂಪ : ಕಾಲ ದೇಶ ಚಾರಿತ್ರಿಕ ಸನ್ನಿವೇಶಗಳು, ಜಿ.ಎಸ್. ಗಾಯಿ, ಪಂಪ–(ಸಂ) ವಿ. ಸೀತಾರಾಮಯ್ಯ ಕವಿಕಾವ್ಯ ಪರಂಪರೆ ಮಾಲೆ, ಪುಟ ೩–೧೯, ೧೯೭೭, ಐಬಿಎಚ್ ಪ್ರಕಾಶನ, ಬೆಂಗಳೂರು.

ಜಿ.ಎಸ್. ಗಾಯಿ ಅವರ ಸಂಶೋಧನ ಲೇಖನಗಳು–(ಸಂ) ಟಿ. ವಿ. ವೆಂಕಟಾಚಲಶಾಸ್ತ್ರೀ, ಪುಟ ೬೬–೮೨, ೨೦೧೦, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೨೨. ಪ್ರಥಮ ತೆಲುಗು ಕಂದ ಪದ್ಯಾಲು : ಜಿನವಲ್ಲಭುನಿ ಗಂಗಾಧರ ಶಾಸನಮು, ವಿಶ್ವಾಮಿತ್ರ, ಭಾರತಿ, ಸಂಪುಟ ೬೧, ಸಂಚಿಕೆ–೭, ಜುಲೈ, ಪುಟ ೬೬–೬೮, ೧೯೮೪.

೨೩. ಕುರ್ಕಿಯಾಲ ಶಾಸನ : ಕೆಲವು ಮುಖಗಳು, ಎಂ.ಬಿ. ನೇಗಿನಹಾಳ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ–೭೦, ಸಂಚಿಕೆ–೨, ಡಿಸೆಂಬರ್, ಪುಟ ೯೫–೧೦೨, ೧೯೮೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ನೇಗಿನಹಾಳ ಪ್ರಬಂಧಗಳು, ಪುಟ ೪೫೭–೪೬೩, ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಕರೀಂನಗರ ಜಿಲ್ಲಾಲೋನಿ ಪಂಪಮಹಾಕವಿ ಸೋದರುನಿ ಜಿನವಲ್ಲಭುಡಿ ಶಾಸನಂ: ಮರಿಕೊನ್ನಿ ಪರಿಶೋಧನಾಂಶಾಲು, ಎಂ. ಚಿದಾನಂದಮೂರ್ತಿ (ತೆಲುಗು ಅನುವಾದ–ಜಿ.ಎಸ್. ಮೋಹನ್), ಭಾರತಿ, ಸಂಪುಟ–೬೩, ಸಂಚಿಕೆ–೩, ಮಾರ್ಚ್, ಪುಟ ೩೪–೩೯ ; ೪೫–೪೬, ೧೯೮೬.

೨೫. ಜಿನವಲ್ಲಭನ ಕುರಿಕ್ಯಾಲ ಶಾಸನ : ಹೆಚ್ಚಿನ ಶೋಧಗಳು ಮತ್ತು ವ್ಯಾಖ್ಯಾನಗಳು, ಎಂ. ಚಿದಾನಂದಮೂರ್ತಿ, ಪ್ರಬುದ್ಧ ಕರ್ಣಾಟಕ ೬೮–೧, ಪುಟ ೬೩–೮೪, ೧೯೮೬, ಮೈಸೂರು ವಿಶ್ವವಿದ್ಯಾನಿಲಯ.

ಹೊಸತು, ಹೊಸತು, ಪುಟ ೮೪–೧೦೪, ೨೦೧೦, ಸಪ್ನ ಬುಕ್ ಹೌಸ್, ಬೆಂಗಳೂರು, ಪರಿಷ್ಕೃತ, ವಿಸ್ತೃತ.

೨೬. ಮೊಟ್ಟಮೊದಟಿ ಕಂದಪದ್ಯಾಲು : ಪುನರ್ವಿವೇಚನ, ಆರ್. ಶೇಷಶಾಸ್ತ್ರಿ, ಜೆ. ಸದಾನಂದಂ, Journal of Telugu, Studies, Vol-1, No-1, April, pp 142-146, ೧೯೮೮, Telugu University, Hyderabad.

೨೭. ಪಂಪನ ಪರಿಸರಗಳು, ಎಂ. ಎಂ. ಕಲಬುರ್ಗಿ, ಮಾರ್ಗ, ಸಂಪುಟ–೧, ಪುಟ ೩೦–೩೯, ೧೯೯೫, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ಪರಿಷ್ಕೃತ ದ್ವಿತೀಯ ಮುದ್ರಣ.

ಪಂಪನ ಅಧ್ಯಯನಗಳು, ಪುಟ ೧೯–೩೦, ೨೦೧೧, ಸಂವಹನ, ಶಿವರಾಂಪೇಟೆ, ಮೈಸೂರು.

೨೮. ಜಿನವಲ್ಲಭನ ವೃಷಭಾದ್ರಿಯ ಶಿಲಾಶಾಸನ, ಸೀತಾರಾಮ ಜಾಗೀರದಾರ್, ಸಾಪೇಕ್ಷ (ಪಂಪನನ್ನು ಕುರಿತ ವಿಮರ್ಶಾತ್ಮಕ ಸಂಪ್ರಬಂಧಗಳು), ಪುಟ ೫೬–೭೦, ೨೦೦೦, ಅತ್ತಿಮಬ್ಬೆ ಪ್ರಕಾಶನ, ಮೈಸೂರು, ಪರಿಷ್ಕೃತ ೨ನೆಯ ಆವೃತ್ತಿ.

೨೯. ಗಂಗಾಧರ ಶಾಸನ, ಕನ್ನಡ ವಿಷಯ ವಿಶ್ವಕೋಶ, ಸಂಪುಟ–೧, ಪುಟ ೭೨೯–೭೩೧, ೨೦೦೫, ಮೈಸೂರು ವಿಶ್ವವಿದ್ಯಾನಿಲಯ, ಪರಿಷ್ಕೃತ ಆವೃತ್ತಿ.

೩೦. ಪಂಪನ ಕಾವ್ಯಗಳು ಮತ್ತು ಕುರ್ಕ್ಯಾಲ ಶಾಸನ, ಕರೀಂನಗರ ಶಾಸನ : ಪ್ರೇರಣೆ, ಸಂಬಂಧ, ಎನ್. ಎಸ್. ತಾರಾನಾಥ, ಪಂಪಾಧ್ಯಯನ–(ಸಂ) ಕೆ.ಈ. ರಾಧಾಕೃಷ್ಣ, ಪುಟ ೭೦–೮೧, ೨೦೧೦, ಸಪ್ನ ಬುಕ್ ಹೌಸ್, ಬೆಂಗಳೂರು.

೩೧. ತೆಲುಗು ಭಾಷೆಯ ಮೊತ್ತಮೊದಲ ಕಂದಪದ್ಯಗಳು : ಪುನರ್ವಿವೇಚನೆ, ಆರ್. ಶೇಷಶಾಸ್ತ್ರೀ, ಜೆ. ಸದಾನಂದಂ (ಕನ್ನಡ ಅನುವಾದ–ಎಸ್. ಕಾರ್ತಿಕ್).

## ಜಿನವಲ್ಲಭನ ಕುರ್ಕ್ಯಾಲ ಶಾಸನ ದಾಖಲಾಗಿರುವ ವರದಿಗಳು ಮತ್ತು ಪ್ರಕಟವಾಗಿರುವ ಶಾಸನ ಸಂಪುಟಗಳು ಹಾಗೂ ಇತರ ಕೃತಿಗಳು

೧. G.S. Gai, Annual Report Of Indian Epigraphy, 1966-67, B-1, pp 17, ೧೯೭೨, Archaeologicla Survey of India, Delhi.

೨. ಪಿ.ವಿ. ಪರಬ್ರಹ್ಮಶಾಸ್ತ್ರೀ, Andhra Pradesh Government Annual Report On Epigraphy, B-178 of 1968, ೧೯೭೫, The Government of Andhra Pradesh, Hyderabad.

೩. C.S. Vasudevan, Kannada Inscriptions of Andhra Pradesh, No-428, 249, pp 124 [428, 249 ನೆಯ ಸಂಖ್ಯೆಯ ದಾಖಲಾತಿಗಳು ಬೇರೆ ಬೇರೆ ಶಾಸನಗಳಾಗಿರದೆ ಒಂದೇ ಶಾಸನವಾಗಿದೆ. ಹಾಗಾಗಿ ಈ ಸಂಪುಟದ ದಾಖಲಾತಿ ಸಮರ್ಪಕವಾಗಿಲ್ಲ ಎಂದು ಹೇಳಬೇಕಾಗಿದೆ], ೧೯೭೯, Kannada University, Hampi.

೪. The Kurkyala Inscription of Jinavallabha, ಎನ್. ವೆಂಕಟರಮಣಯ್ಯ, Epigrphia Andhrica, Vol-2, pp 21-30. No-3, ೧೯೭೪, Government of Andra Pradesh, Hyderabad.

೫. ಪಿ.ವಿ. ಪರಬ್ರಹ್ಮಶಾಸ್ತ್ರೀ, Inscription of Andhrapradesh (karimnagar District), pp 10-11, No-3, 1974, Government of Andra Pradesh, Hyderabad.

೬ ಗಂಗಾಧರಂ ಶಾಸನ, ಆರ್.ಸಿ. ಹಿರೇಮಠ ಎಂ.ಎಂ. ಕಲಬುರ್ಗಿ, ಕನ್ನಡ ಶಾಸನ ಸಂಪದ, ಪುಟ ೨೨-೨೪. ಸಂಖ್ಯೆ-೧೫., ೧೯೯೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪರಿಷ್ಕೃತ ೪ನೆಯ ಮುದ್ರಣ.

೭. Kolluru Suryanarayana, Inscription of the Minor Chalukya Dynasties of Andhra Pradesh, No-4, pp 14-15, 1993, Mittal Publications, New Delhi.

೮. ಕುರ್ಕ್ಯಾಲ ಗಂಡ ಶಿಲಾಶಾಸನಮು, ಬಿ.ಎನ್. ಶಾಸ್ತ್ರಿ, ವೇಮುಲವಾಡ ಚರಿತ್ರ-ಶಾಸನಮುಲು, ಪುಟ ೧೦೪-೧೦೯, ೧೯೯೧, ಮೂಸಿ ಪಬ್ಲಿಕೇಷನ್ಸ್, ಹೈದರಾಬಾದು.

೯. Kurkyla Inscription of the time of the King Arikesarin-II, ಘಂಟಾ ಜವಹರ್‌ಲಾಲ್, ಜೈನಿಸಂ ಇನ್ ಆಂಧ್ರ, ಪುಟ ೩೫೧, ಸಂಖ್ಯೆ-೫೫, ೧೯೯೪, ಪ್ರಾಕೃತ ಭಾರತಿ ಅಕಾಡೆಮಿ, ಜೈಪುರ್ ಮತ್ತು ಅಖಿಲ ಭಾರತೀಯ ಶ್ರೀಸುವರ್ಣ ಜೈನ ಸೇವಾ ಸಂಘ ಫಂಡ್, ಹೈದರಾಬಾದ್.

೧೦. ಆರ್. ಶೇಷಶಾಸ್ತ್ರಿ, ಕೆ.ಆರ್. ಗಣೇಶ, ಆಂಧ್ರಪ್ರದೇಶದ ಕನ್ನಡ ಶಾಸನಗಳು, ಸಂಪುಟ-೫, ಭಾಗ-೨, ಪುಟ ೫೧-೫೩, ಸಂಖ್ಯೆ-೪೦೪, ೨೦೦೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಜಿನವಲ್ಲಭನ ಕುರ್ಕ್ಯಾಲ ಶಾಸನ, ಶ್ರೀನಿವಾಸ ಪಾಡಿಗಾರ, ಭಾರತೀಯ ಇತಿಹಾಸದ ಶಾಸನ ಆಕರಗಳು, ಪುಟ ೧೧೫-೧೨೧, ೨೦೦೪, ರಾಮಾಶ್ರಯ ಪಬ್ಲಿಕೇಷನ್ಸ್, ಧಾರವಾಡ.

೧೨. ಜಿನವಲ್ಲಭ ಶಾಸನ, ಎ.ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ೨೦೦೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ಮಾಮಿಡಿ ರಾಜನ್ನ, ವೇಮುಲವಾಡ ಶ್ರೀರಾಜರಾಜೇಶ್ವರ ಕ್ಷೇತ್ರಮು: ಸಂಬಂಧಿ ಸಾಹಿತ್ಯಮು, ಪುಟ ೨೫೧-೨೫೨, ೨೦೧೧, ಪ್ರಕಟನೆ : ಮಾಮಿಡಿ ರಾಜನ್ನ.

## ಜಿನವಲ್ಲಭ ಮತ್ತು ಕುರ್ಕ್ಯಾಲ ಶಾಸನಕ್ಕೆ ಸಂಬಂಧಿಸುವ / ಮಾಹಿತಿ ದೊರಕುವ ಇತರ ಬರಹಗಳು

೧. ಪಂಪನ ತಮ್ಮ ಜಿನವಲ್ಲಭ, ಎಂ.ಎಂ. ಕಲಬುರ್ಗಿ, ಸಾಧನೆ ೪-೨, ೧೯೭೫, ಬೆಂಗಳೂರು ವಿಶ್ವವಿದ್ಯಾಲಯ.

ಮಾರ್ಗ-೧, ಪುಟ ೬೦-೬೨, ೧೯೯೫, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ಪರಿಷ್ಕೃತ ದ್ವಿತೀಯ ಮುದ್ರಣ.

೨. ಜಿನವಲ್ಲಭ, ಬಿ.ಎಸ್. ಸರೋಜ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ [(ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ] ಸಂಪುಟ-೩, ಪುಟ ೨೧೬-೨೧೮, ೧೯೭೬, ಮೈಸೂರು ವಿಶ್ವವಿದ್ಯಾನಿಲಯ.

೩. ಪಂಪನ ಇತಿವೃತ್ತ, ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ [ಸಂ] ಟಿ.ವಿ. ವೆಂಕಟಾಚಲ ಶಾಸ್ತ್ರೀ] ಸಂಪುಟ–೩, ಪುಟ ೪೦೦–೪೨೨, ೧೯೭೬, ಮೈಸೂರು ವಿಶ್ವವಿದ್ಯಾನಿಲಯ.

ಶಾಸ್ತ್ರೀಯ–೩, ಪುಟ ೪೧೮–೪೪೦, ೧೯೯೯, ಸಪ್ನ ಬುಕ್ ಹೌಸ್, ಬೆಂಗಳೂರು.

೪. ಪಂಪಭಾರತದ ರಚನಾ ಕಾಲ : ಒಂದು ಲಘು ಟಿಪ್ಪಣಿ, ಎಂ. ಚಿದಾನಂದಮೂರ್ತಿ, ಸಾಧನೆ ೧೨–೩, ಜುಲೈ–ಸೆಪ್ಟೆಂಬರ್, ಪುಟ ೧೩೨–೧೩೫, ೧೯೮೩, ಬೆಂಗಳೂರು ವಿಶ್ವವಿದ್ಯಾಲಯ.

ಟಿಪ್ಪಣಿ, ಹೊಸತು, ಹೊಸತು, ಪುಟ ೪೫–೪೮, ೨೦೧೦, ಸಪ್ನ ಬುಕ್ ಹೌಸ್, ಬೆಂಗಳೂರು, ಪರಿಷ್ಕೃತ, ವಿಸ್ತೃತ.

೫. ಜಿನವಲ್ಲಭನ ಮೇಲೆ ಹೊಸಬೆಳಕು, ಮೂಲ: ಪಿ.ವಿ. ಪರಬ್ರಹ್ಮಶಾಸ್ತ್ರಿ (ಕನ್ನಡ ಅನುವಾದ–ಆರ್. ಶೇಷಶಾಸ್ತ್ರೀ), ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೬೧–೬೨, ಸಂಚಿಕೆ ೨–೧, ಡಿಸೆಂಬರ್ ೧೯೮೩ ಮತ್ತು ಜೂನ್ ೧೯೮೬, ಪುಟ ೪೮–೫೪, ೧೯೮೬–೮೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಕವಿಜನಾಶ್ರಯಮು ಕರ್ತೃತ್ವಮು: ಪುನಃಪರಿಶೀಲನ, ಆರ್. ಶೇಷಶಾಸ್ತ್ರೀ, ಜಿ. ಸದಾನಂದಂ, ಭಾರತಿ, ಸಂಪುಟ–೬೫, ಸಂಚಿಕೆ–೭, ಜುಲೈ, ಪುಟ ೪೪–೪೯, ೧೯೮೮.

೭. Two Inscriptions of Pampa's, Sister-in-Law, Bhagiyabbe, A.V. Narasimhamurthy, Indian History and Epigraphy {Dr. G.S. Gal Felication Volume}-(Ed) K.V. Ramesh & Others, pp 219-221, 1990, Agam Kala Prakashan, Delhi.

೮. ಪಂಪನ ನಾದಿನಿ ಭಗಿಯಬ್ಬೆಯ ಎರಡು ಶಾಸನಗಳು, ಎ.ವಿ. ನರಸಿಂಹಮೂರ್ತಿ, ಕರ್ನಾಟಕ ಪುರಾತತ್ತ್ವ ಕೆಲವು ಅಧ್ಯಯನಗಳು, ಪುಟ ೧೬೧–೧೬೭, ೨೦೧೦, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೯. ಜಿನವಲ್ಲಭಸೂರಿ ಕೃತ ಮಹಾವೀರಸ್ವಾಮಿ ಸ್ತೋತ್ರಂ, ತಿರುಮಲ ರಾಮಚಂದ್ರ, ಸಾಹಿತಿ ಸಂಪದ (ಕೋವೆಲ ಸಂಪತ್ಕುಮಾರಾಚಾರ್ಯ ಷಷ್ಟಿಪೂರ್ತಿ ಅಭಿನಂದನ ಗ್ರಂಥಂ), ಪುಟ ೮೧–೯೪, ೧೯೯೩, ಷಷ್ಟಿಪೂರ್ತಿ ಅಭಿನಂದನ ಸಮಿತಿ, ವಾರಂಗಲ್ಲು.

೧೦. ಜಿನವಲ್ಲಭಸೂರಿ ಕೃತ ಮಹಾವೀರಸ್ವಾಮಿ ಸ್ತೋತ್ರಂ, ತಿರುಮಲ ರಾಮಚಂದ್ರ (ಕನ್ನಡ ಅನುವಾದ–ಆರ್. ಶೇಷಶಾಸ್ತ್ರೀ), ಸಾಧನೆ, ಸಂಪುಟ–೨೬, ಸಂಚಿಕೆ–೧, ಜನವರಿ, ಪುಟ ೨–೧೫, ೧೯೯೭, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೧. Mining Mafia Casts Its Evil On Bommala Gutta, Naveen Kumar Tallam, Sunday Express, 19-9-2010, Sunday, 2010, Hyderabad.

೧೨. Jinavallabha, Ham.pa.Nagarajaiah, Rashtrakutas Re- Revisited, pp 254-257, 2014, Ruvari, Abhinava, imprint, Bangalore.

೧೩. ಕವಿಜನಾಶ್ರಯಮು ಕೃತಿಯ ಕರ್ತೃತ್ವದ ವಿಚಾರ: ಪುನಃಪರಿಶೀಲನೆ, ಆರ್. ಶೇಷಶಾಸ್ತ್ರೀ, ಜಿ. ಸದಾನಂದಂ (ಕನ್ನಡ ಅನುವಾದ–ಎಸ್. ಕಾರ್ತಿಕ್).

# ತರಗತಿಯ ಬೋಧನೆಯ ಸಂದರ್ಭದಲ್ಲಿ ಪಠ್ಯದ ಸ್ವರೂಪ

◆

ಸಂಧ್ಯಾ ಹೆಗಡೆ

ರಾಮಕೃಷ್ಣ ಪರಮಹಂಸರ ಒಂದು ಕಥೆಯಿದೆ. ಒಂದು ರಾತ್ರಿ ಕೆಲವು ಕುಡುಕರು ದೋಣಿ ವಿಹಾರ ಮಾಡಲು ಹೊರಟರಂತೆ. ಆದರೆ ಬೆಳಗ್ಗೆ ಮಂಪರು ಸರಿದು ನೋಡಿದಾಗ ಅವರ ದೋಣಿ ಒಂದಡಿ ಕೂಡ ಚಲಿಸದೆ ಅಲ್ಲಲ್ಲಿಯೇ ಇತ್ತಂತೆ. ಪರಿಶೀಲಿಸಿ ನೋಡಿದರೆ ಅವರು ದಡಕ್ಕೆ ಕಟ್ಟಿದ್ದ ದೋಣಿಯ ಹಗ್ಗವನ್ನೇ ಬಿಚ್ಚಿರಲಿಲ್ಲವಂತೆ! ಹಾಗೇ ರಾತ್ರಿಯೆಲ್ಲ ಹುಟ್ಟು ಹಾಕಿದ್ದು ಹಾಕಿದ್ದೇ ! ನಾವೂ ಹೀಗೆಯೇ... ಇವತ್ತು ಶಿಕ್ಷಣ, ಶಿಕ್ಷಕ, ವಿದ್ಯಾರ್ಥಿಗಳು, ಸಮಾಜ ವ್ಯವಸ್ಥೆ ಎಂದೆಲ್ಲ ಯೋಚಿಸುತ್ತೇವೆ. ಇದೆಲ್ಲಕ್ಕೂ ಮೂಲವಾದದ್ದು ಯಾವುದೋ ಆ 'ಪಠ್ಯ'ದ ಕಡೆಗೆ ಕೊಡಬೇಕಾದಷ್ಟು ಗಮನಕೊಡುವುದಿಲ್ಲ. ಹಾಗಾದರೆ ಪಠ್ಯ ಎಂದರೆ ಯಾವುದು? ಬಿಳಿಯ ಹಾಳೆಗಳ ಮೇಲೆ ಬರೆದದ್ದೇ? ನಿರ್ದಿಷ್ಟವಾಗಿ ಗೊತ್ತುಪಡಿಸಿದ್ದೇ? ಅದರ ಸ್ವರೂಪ ಹೇಗಿರುತ್ತದೆ? ಒಂದೇ ಆಗಿರುತ್ತದೆಯೇ? ಬದಲಾಗುವಂತಹುದೇ? ಎಂದೆಲ್ಲ ಪ್ರಶ್ನೆಗಳು ಸಹಜ. ಯಾಕೆ ಈ ರೀತಿಯ ಪ್ರಶ್ನೆಗಳು ಏಳುತ್ತವೆ ಎಂದರೆ–ನಮ್ಮ ಸಮಾಜದ ವ್ಯವಸ್ಥೆಯೇ ಹಾಗಿದೆ. ಯೂರೋಪಿಯನ್ ಮಾದರಿಯ ಸಮಾಜಗಳಲ್ಲಿ ನಿರ್ದಿಷ್ಟವಾದ ವ್ಯಾಖ್ಯಾನಗಳನ್ನು ಕೊಡುವುದು ಸುಲಭ. ಭಾರತದಲ್ಲಿರುವಷ್ಟು ದೇವರುಗಳು, ಆಚರಣೆ ಗಳು, ನಂಬಿಕೆಗಳು, ಸಮುದಾಯಗಳು, ಜೀವನಕ್ರಮಗಳು, ಬಟ್ಟೆ, ಭಾಷೆ, ಸಂಸ್ಕೃತಿಗಳು ಬೇರೆ ಕಡೆ ಕಡಿಮೆ. ಇವತ್ತಿಗೂ ಯೂರೋಪಿಯನ್ನರು 'ನೀವು ಇಷ್ಟೊಂದು ದೇವರುಗಳನ್ನು ಹೇಗೆ ಪೂಜಿಸುತ್ತೀರಿ?' ಎಂಬ ಸೋಜಿಗದ ಪ್ರಶ್ನೆಯನ್ನು ಕೇಳುತ್ತಾರೆ. ಸಮರ್ಪಕವಾಗಿ ಉತ್ತರಿಸುವುದು ಕಷ್ಟವಾದರೂ 'ಹಾಗಿರುವುದರಿಂದಲೇ ನಮ್ಮ ಜನಪದ, ಸಂಸ್ಕೃತಿ ಉಳಿದಿರುವುದು' ಎನ್ನುವುದನ್ನು ಅವರ ಗಮನಕ್ಕೆ ತರುವುದು ಒಂದು ಕ್ರಮ. ಹೀಗೆ ಹಲವು ಜಾತಿ, ಧರ್ಮ, ವರ್ಣಗಳಿಂದ ಬಂದ ವಿದ್ಯಾರ್ಥಿಗಳಿಗೆ ಏಕರೂಪಿಯಾದ ಪಠ್ಯವನ್ನು ಬೋಧಿಸುವುದು ಹೇಗೆ?

ನಮ್ಮ ಚಿಂತನಾಕ್ರಮದಲ್ಲಿ ಇದಕ್ಕೆ ಬೇರೆಯದೇ ನೆಲೆಯಿದೆ. ನಾವು ಯಾವತ್ತೂ ಒಂದು ಕೃತಿಯನ್ನು, ಚಿಂತನೆಯನ್ನು ಒಂದು ಕಾಲ ಮತ್ತು ದೇಶಗಳ ಮಿತಿಯಲ್ಲಿ

ನೋಡಿಲ್ಲ. ಅಂದರೆ ಪಠ್ಯ ಎನ್ನುವುದು ಆಯಾ ಕಾಲ ಮತ್ತು ದೇಶಗಳ ಸನ್ನಿಧಿಯಲ್ಲಿ ರೂಪುತಳೆಯುವಂಥದು. ಹಾಗಾದರೆ ಪುಸ್ತಕದಲ್ಲಿ ನಿಗದಿಪಡಿಸಿದ ಪಾಠ, ಕವಿತೆ ಅಥವಾ ಕಾದಂಬರಿ ಪಠ್ಯವಲ್ಲವೇ? ಖಂಡಿತಾ ಅದು ಪಠ್ಯ ಸಾಮಗ್ರಿ. ಆದರೆ ಅದು ಪಠ್ಯವಾಗಿ ರೂಪತಳೆಯುವುದು ಒಂದು ತರಗತಿಯ(ಪಿರಿಯಡ್)ಲ್ಲಿ, ಅದೂ ವಿದ್ಯಾರ್ಥಿ ಮತ್ತು ಶಿಕ್ಷಕರ ನಡುವೆ. ಅಂದರೆ ಒಂದು ತರಗತಿಗೆ ಕುಮಾರವ್ಯಾಸನ ಪದ್ಯ ಇದೆ ಎಂದುಕೊಳ್ಳೋಣ. ಅದು ಪಠ್ಯದಲ್ಲಿ ಯಾವತ್ತೂ ಇರುತ್ತದೆ. ಅದನ್ನು ಬೋಧಿಸುವ ಸಮಯದಲ್ಲಿ ಮತ್ತು ಸ್ಥಳದಲ್ಲಿ ಕುಮಾರವ್ಯಾಸನ ಪದ್ಯ ತನ್ನ ಪ್ರಯಾಣವನ್ನು ಆರಂಭಿಸುತ್ತದೆ. ಅಲ್ಲಿರುವ ಅಕ್ಷರಗಳು ಕೇವಲ ಅಕ್ಷರಗಳಾಗದೆ ಜೀವಂತ ಚೈತನ್ಯಗಳಾಗುತ್ತವೆ. ಕರ್ಣನೋ ಕುಂತಿಯೋ ಅರ್ಜುನನೋ ಕೃಷ್ಣನೋ ನಮ್ಮ ಮಧ್ಯೆ ಉಸಿರಾಡುತ್ತಿರುವ ವ್ಯಕ್ತಿಯಾಗಿ ಬಿಡುತ್ತಾರೆ. ಆ ಕರ್ಣ ಏಕಕಾಲಕ್ಕೆ ಮಹಾಭಾರತದ, ಪಂಪನ ಮತ್ತು ಕುಮಾರವ್ಯಾಸನ ಕಾಲದವನೂ ಆಗಿ ನಮ್ಮ ಕಾಲಕ್ಕೆ ಬಂದುಬಿಡುತ್ತಾನೆ. ನಮ್ಮ ನಮ್ಮ ಮನಸ್ಸುಗಳಲ್ಲಿ ಅವನ ವ್ಯಕ್ತಿತ್ವ, ರೂಪಗಳು ಚಿತ್ರಿತವಾಗುತ್ತವೆ. ಅದು ಆ ಕಾಲಘಟ್ಟದಲ್ಲಿ ಮೂಡುವ ಚಿತ್ರವಾದರೂ ಮಾರನೆಯ ದಿನ ಅದೇ ಸ್ಥಳದಲ್ಲಿ ಅದೇ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ರೂಪುತಳೆಯುವ ಕರ್ಣ ಬೇರೆಯವನೇ ಆಗಿರುತ್ತಾನೆ. ಹೀಗೆ ಒಂದು ವಸ್ತು/ವ್ಯಕ್ತಿ/ ಪಾತ್ರ/ಕೃತಿ ನಿರಂತರವಾದ ಬದಲಾವಣೆಗೆ ಮತ್ತು ಬೆಳವಣಿಗೆಗೆ ಯಾವಾಗಲೂ ತೆರೆದುಕೊಂಡಿರುತ್ತದೆ. ಅದು ಪ್ರಕೃತಿಯಲ್ಲಿಯೇ ಇರುವ ಒಂದು ಕ್ರಮ. ಇದು ಒಂದು ನೆಲೆಯಲ್ಲಿ ಪ್ರಕಟಗೊಳ್ಳುವ ಪಠ್ಯವಾದರೆ (ಶಿಕ್ಷಣದ ಉದ್ದೇಶ ಫಲಿತಗೊಳ್ಳುವುದು ನಿರ್ದಿಷ್ಟ ಪಠ್ಯದಲ್ಲಿ). ಇದಕ್ಕೆ ಇನ್ನೊಂದು ಆಯಾಮವೂ ಉಂಟು. ಅನೌಪಚಾರಿಕ ಶಿಕ್ಷಣದಲ್ಲಿ ನಿರ್ದಿಷ್ಟ ಪಠ್ಯದ ಚೌಕಟ್ಟಿಲ್ಲದೆ ಕಾಲದೇಶಗಳ ಮಧ್ಯೆಯೇ ರೂಪತಳೆಯುತ್ತಿರುತ್ತದೆ. ಕೃಷಿ, ಸಂಗೀತದಂಥ ಕ್ಷೇತ್ರಗಳಲ್ಲಿ ಇದು ಸಹಜ.

ಸಾಹಿತ್ಯದಂತಹ ಸೃಜನಶೀಲ ವಿಷಯವನ್ನು ಬೋಧಿಸುವಾಗ ಅದರ ಪಠ್ಯ, ಕಾಲಮಿತಿ, ಪರೀಕ್ಷೆ, ವಿದ್ಯಾರ್ಥಿಗಳು ಎಲ್ಲವೂ ಕೂಡ ಅಧ್ಯಾಪಕನಾಗಿರುವಂಥವನಿಗೆ ಸವಾಲಿನ ವಿಷಯವೇ. ಯಾವ ಪಠ್ಯ? ಎಷ್ಟು? ಎಲ್ಲಿ? ಹೇಗೆ? ಮುಂತಾದ ಪ್ರಶ್ನೆಗಳ ಜೊತೆಗೆ ಆ ಪಠ್ಯ ತರಗತಿಯಲ್ಲಿ ಆಕೃತಿ ಪಡೆಯುವ ಸಂದರ್ಭದಲ್ಲಿ ಮೂರ್ತಗೊಳ್ಳ ಬೇಕಾದ/ಗೊಳ್ಳುವ ಪಠ್ಯ ಸವಾಲು ಇನ್ನೊಂದು ಕಡೆ. ಇದು ಒಂದು ನೆಲೆಯಲ್ಲಿ ಅಧ್ಯಾಪಕನ ಕೌಶಲವನ್ನೇ ಅವಲಂಬಿಸಿರುವಂಥದು ಮತ್ತು ಬಹುಮುಖಿ ಬೋಧನಾ ಕ್ರಮವನ್ನು ಬೇಡುವಂಥದು. ಯಾಕೆಂದರೆ ಉನ್ನತಶಿಕ್ಷಣ ಹಂತದಲ್ಲಿ ವಿದ್ಯಾರ್ಥಿಗಳಿಗೆ ಪಠ್ಯದ ಪ್ರಾಥಮಿಕ ಪರಿಚಯವಿರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾದುದು ವಿಭಿನ್ನ ಅಭಿರುಚಿ, ಪರಿಸರ, ಅನುಭವಗಳ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳಿಗೆ ಪಠ್ಯವನ್ನು ಮುಟ್ಟಿಸುವಲ್ಲಿ ಅಧ್ಯಾಪಕನ ಕಾಳಜಿ ಯಾವುದಾಗಿರಬೇಕು ಎಂಬ ಪ್ರಶ್ನೆ.

ಉದಾಹರಣೆಯೊಂದಿಗೆ ಇದನ್ನು ಸ್ಪಷ್ಟಪಡಿಸಬಹುದಾದರೆ ಎರಡು ಘಟನೆಗಳು ನನ್ನ ಮನಸ್ಸಿನಲ್ಲಿವೆ:

ಒಂದು: ವಿದ್ಯಾರ್ಥಿದೆಸೆಯಲ್ಲಿದ್ದಾಗ ಆದ ಅನುಭವ, ಇನ್ನೊಂದು: ಉಪನ್ಯಾಸಕಿಯಾದ ಮೇಲೆ ಆದದ್ದು. ಧಾರವಾಡದಲ್ಲಿ ಎಂ.ಎ. ಓದುತ್ತಿದ್ದ ದಿನಗಳವು. ಸಹಪಾಠಿಗಳೆಲ್ಲ ಕುವೆಂಪು, ಕಾರಂತ, ಚಿತ್ತಾಲರ ಬರವಣಿಗೆಗಳನೆಲ್ಲ ಸ್ವಲ್ಪ ಕ್ಲಿಷ್ಟ ಎನ್ನುತ್ತಿದ್ದರು. ಅವರಿಗೆ ಈ ಲೇಖಕರ ಓದು ಅಷ್ಟು ಬೇಗ ತಟ್ಟುತ್ತಿರಲಿಲ್ಲ. ಉತ್ತರಕನ್ನಡ ಜಿಲ್ಲೆಯವಳಾದ ನನಗೆ ಕುವೆಂಪು ಅವರ ಮಲೆನಾಡಿನ ಮಳೆಕಾಡು, ಚಿತ್ತಾಲರ ಮತ್ತು ಕಾರಂತರ ಕಡಲು, ತೇಜಸ್ವಿ ಅವರ ಬರಹಗಳ ಪ್ರಕೃತಿ ಎಲ್ಲವೂ ಒಂದು ತರಹದ ಪುಳಕವನ್ನು ಉಂಟುಮಾಡುತ್ತಿತ್ತು. ಆಗೆಲ್ಲ ಯೋಚಿಸುತ್ತಿದ್ದೆ. ಇವರಿಗೆಲ್ಲ ಇಷ್ಟು ಚಂದ ಬರೆದಿರುವ ಬರಹಗಳು ಯಾಕೆ ಇಷ್ಟವಾಗುತ್ತಿಲ್ಲ ಎಂದು. ಆದರೆ ಅವರನ್ನು ಬೇಂದ್ರೆಯವರ ಪದ್ಯಗಳು ಬೇಗ ತಟ್ಟುತ್ತಿದ್ದವು. ಬೇಂದ್ರೆ ಪದ್ಯಗಳು ನನಗೆ ಇಷ್ಟವಾದರೂ ಅವರು ಅದನ್ನು ಬೇರೆಯದ್ದೇ ರೀತಿಯಲ್ಲಿ ಸುಖಿಸುತ್ತಿದ್ದರು. ಪ್ರಾದೇಶಿಕತೆ ಕೂಡಾ ಒಂದು ಕೃತಿಯನ್ನು ಅಭ್ಯಾಸಿಸುವಾಗ ಪರಿಣಾಮ ಬೀರುತ್ತದೆ ಎಂಬುದು ಅಂದು ಅರ್ಥವಾಯಿತು. ಸಹಜವಾಗಿಯೇ ಧಾರವಾಡದ ಪರಿಸರವನ್ನು, ಭಾಷೆಯನ್ನು ತಮ್ಮ ಕವನಗಳಲ್ಲಿ ದಾಖಲಿಸಿದ ಬೇಂದ್ರೆ ಧಾರವಾಡದ ಪರಿಸರಕ್ಕೆ ಹೊರತಾಗಿರಲಿಲ್ಲ ಎಂಬ ಕಾರಣಕ್ಕೆ ಧಾರವಾಡದ ಸುತ್ತಲಿನ ಪರಿಸರದವರಾದ ಸಹಪಾಠಿಗಳಿಗೆ ಬೇಂದ್ರೆ ಹೆಚ್ಚು ಆಪ್ತ ಎನಿಸಿರಬಹುದು. ಆದರೆ ನಮ್ಮ ನಡುವಿನ ದೊಡ್ಡ ಕವಿ ಬೇಂದ್ರೆ ಎಂಬಲ್ಲಿ ಮತ್ತೆ ಮಾತಿಲ್ಲ. ನಂತರದ ದಿನಗಳಲ್ಲಿ ಬೇಂದ್ರೆ ತುಂಬ ಇಷ್ಟದ ಕವಿಯಾಗಲು ಬಹುಶಃ ಅಲ್ಲಿ ನಾನು ಒಡನಾಡಿದ ಪರಿಸರವೂ ಬಹುಮಟ್ಟಿಗೆ ಕಾರಣವಾಗಿರಬಹುದು. ನನ್ನ ಮನೋಪ್ರಪಂಚ ಬೆಳೆದಂತೆಲ್ಲ ಬೇಂದ್ರೆಯಂಥ ಕವಿ ಎಲ್ಲ ಪರಿಸರದ, ಮನೋಧರ್ಮದ ಜನರಿಗೂ ತಲುಪಬಲ್ಲರು ಎನ್ನಿಸಿತು.

ಎಂ.ಎ. ಮುಗಿದು ಧಾರವಾಡದಲ್ಲೆ ಉಪನ್ಯಾಸಕಿಯಾಗುವ ಅವಕಾಶ ಒದಗಿ ಬಂದಿತ್ತು. ಲಂಕೇಶರ 'ಅವ್ವ' ಪದ್ಯವನ್ನು ಕಲಿಸುತ್ತಿದ್ದ ಸಂದರ್ಭ. ಸುಮಾರು ೧೫೦ ಜನರಿದ್ದ ಕ್ಲಾಸಿನಲ್ಲಿ ಬಹುತೇಕ ಎಲ್ಲರ ಕಣ್ಣಂಚು ಒದ್ದೆಯಾಗಿತ್ತು. ಇದರರ್ಥ ನಾನು ಪಾಠ ಚೆನ್ನಾಗಿ ಮಾಡಿದ್ದೇನೆಂಬ ಜಂಭವಲ್ಲ. ಬದಲಾಗಿ ಬಹುತೇಕ ಗ್ರಾಮೀಣ ಪರಿಸರದಿಂದ ಬಂದಂತಹ ಅಲ್ಲಿಯ ಮಕ್ಕಳು ಲಂಕೇಶರ 'ಬನದ ಕರಡಿ ಅವ್ವ'ನಂತಹ ಅವ್ವನನ್ನು ಕಂಡವರು. ಅದೇ ಪಾಠವನ್ನು ಬೆಂಗಳೂರಿನ ಕಾಲೇಜಿನಲ್ಲಿ ಮಾಡಿದಾಗ ಧಾರವಾಡದಲ್ಲಿ ಮಾಡಿದಷ್ಟು ಪರಿಣಾಮ ಬೀರಿತು ಎನಿಸಲಿಲ್ಲ. ಯಾಕೆಂದರೆ ಹಲವು ವಿದ್ಯಾರ್ಥಿಗಳು ನಗರಪ್ರದೇಶದ ಶಾಂತ, ಶ್ವೇತ, ಗಂಭೀರ ತಾಯಂದಿರನ್ನು ನೋಡಿದವರು. ಬನದ ಕರಡಿಯ ತಾಯಿಯ ವಿಷಯ ಅವರಿಗೆ ಅಪರಿಚಿತ. ಅಂದರೆ ಒಂದೇ ಪಠ್ಯ ವಿಭಿನ್ನ ಪರಿಸರದಲ್ಲಿ ವಿಭಿನ್ನ ಪರಿಣಾಮ ಬೀರುತ್ತದೆ ಎಂದಾಯಿತು. ಹೀಗಿರುವಾಗ ವಿದ್ಯಾರ್ಥಿಯ ಅರಿವನ್ನು ಸೃಜನಶೀಲವಾಗಿ ಹಾಗೂ ಮಾನವೀಯವಾಗಿ ವಿಕಾಸವಾಗುವಂತೆ ಮಾಡುವುದು ಶಿಕ್ಷಕನ ಜವಾಬ್ದಾರಿಯಾದಾಗ ಅವನು ಅನುಸರಿಸಬೇಕಾದ ದಾರಿಗಳು, ಕ್ರಮಗಳು ಯಾವುವು? ಲಂಕೇಶರ 'ಅವ್ವ'ನನ್ನು ನೋಡುತ್ತಲೇ, ಯುದ್ಧರಂಗಕ್ಕೆ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಹೋದ ತಾಯಿ

ಲಕ್ಷ್ಮೀಬಾಯಿಯ ಚಿತ್ರವನ್ನು ಹಾಗೂ ಅಂತಹ ಧೈರ್ಯದ ಹೆಣ್ಣನ್ನು ಅವಳ ಜವಾಬ್ದಾರಿಯನ್ನು; ಶಿವಾಜಿಯನ್ನು ರೂಪಿಸಿದ ಜೀಜಾಬಾಯಿಯನ್ನು; ಮಗುವನ್ನು ಎದೆಗವಚಿಕೊಂಡು ಟೀ ಸೊಪ್ಪು ಕೀಳುವ ಟಿಬೆಟ್ಟಿನ ಒಬ್ಬ ಸಾಮಾನ್ಯ ಮಹಿಳೆಯನ್ನು; ಕಸದ ತೊಟ್ಟಿಯಲ್ಲಿ ಮಗುವನ್ನು ಬಿಟ್ಟು ಹೋಗುವ ಅನಾಮಿಕ ತಾಯಿಯ ಅನಿವಾರ್ಯತೆಯನ್ನು; ಅಥವಾ ಅವ್ವನ ಬಗ್ಗೆ ಇತರ ಕವಿಗಳು ಬರೆದ ಕವನಗಳನ್ನು ತರಗತಿಯಲ್ಲಿ ವಿದ್ಯಾರ್ಥಿಗಳಿಗೆ ಮುಟ್ಟಿಸುವಲ್ಲಿ ಅಧ್ಯಾಪಕರು ಶಕ್ತರಾದರೆ ಮಾತ್ರ ಆ ಪಠ್ಯ ಸಾರ್ಥಕತೆಯನ್ನು ಪಡೆದುಕೊಳ್ಳುತ್ತದೆ.

ಒಮ್ಮೆ ಹೀಗಾಯಿತಂತೆ: ಒಂದಷ್ಟು ವಿದ್ಯಾರ್ಥಿಗಳೊಡನೆ ಅಧ್ಯಾಪಕನೊಬ್ಬ ಗೆಳೆಯರ ಮನೆಗೆ ಹೋದರಂತೆ. ಆ ಮನೆಯ ಯಜಮಾನ ಕೆಲ ಆಕರ್ಷಕ ಲೋಟಗಳಲ್ಲಿ ಮತ್ತು ಆಕರ್ಷಕವಲ್ಲದ ಲೋಟದಲ್ಲಿಯೂ ಚಹಾ ತಂದುಕೊಟ್ಟನಂತೆ. ಆಕರ್ಷಕವಾದ ಲೋಟಗಳಲ್ಲಿರುವ ಚಹಾ ಲೋಟಗಳನ್ನೇ ಆರಿಸಿಕೊಂಡ ವಿದ್ಯಾರ್ಥಿಗಳು ಚಂದವಿಲ್ಲದ ಲೋಟವನ್ನು ಅಧ್ಯಾಪಕನಿಗೆ ಬಿಟ್ಟರಂತೆ. ಖುಷಿಯಿಂದಲೇ ಅದನ್ನು ತೆಗೆದುಕೊಂಡ ಅಧ್ಯಾಪಕ ಚಹಾ ಕುಡಿದ ಮೇಲೆ ಹೇಳಿದನಂತೆ: 'ನೋಡಿ ಅವನು ಚಹಾ ಮಾಡಿದ್ದು ಒಂದೇ ಪಾತ್ರೆಯಲ್ಲಿ. ಒಂದೇ ಸಮಯದಲ್ಲಿ. ಹಾಕಿದ್ದು ಮಾತ್ರ ಬೇರೆ ಬೇರೆ ಲೋಟಗಳಲ್ಲಿ. ಲೋಟದ ಕಾರಣಕ್ಕೆ ಚಹಾದ ರುಚಿ, ಬಣ್ಣ, ವಾಸನೆ ಯಾವುದೂ ಬದಲಾಗಲಿಲ್ಲ' ಎಂದು. ಹೊರ ನೋಟದಿಂದಲೇ ಅಳೆಯುವ ನಮ್ಮ ಮನಸ್ಸಿನ ಕ್ರಮ ಒಮ್ಮೊಮ್ಮೆ ನಿಜವಾಗಿ ಒಳಗಿರುವ ತಿರುಳನ್ನೂ ಕಳೆದುಕೊಂಡುಬಿಡಬಹುದಲ್ಲವೇ?

ಇಷ್ಟಾದರೂ ಶಿಕ್ಷಕರ ಕೆಲಸ ಕಡಿಮೆಯದೇನಲ್ಲ. ವಿಷಯದ ಹರಹಿಲ್ಲದ ಪಠ್ಯಕ್ರಮ, ಪರೀಕ್ಷಾಮುಖಿಯಾದ ಮಕ್ಕಳ ಗಮನ; ಆಸಕ್ತಿ, ಅಭಿರುಚಿ, ಸಂವೇದನೆ, ವಿಭಿನ್ನ ಪರಿಸರದಿಂದ ಬಂದ ಮಕ್ಕಳು; ಸೆಮಿಸ್ಟರ್ ಎಂಬ ವೇಗದ ಭೂತ; ಅತಿ ನಿರಾಸಕ್ತ ಅಥವಾ ಅತಿ ಬುದ್ಧಿವಂತ ಮಕ್ಕಳು– ಈ ಎಲ್ಲ ಸಮಸ್ಯೆಗಳ/ ಸವಾಲುಗಳ ನಡುವೆಯೂ ಶಿಕ್ಷಕನ ಜವಾಬುದಾರಿ ಮತ್ತು ಆಸಕ್ತಿ ಯಾವುದಿರಬೇಕು? ಸಾಹಿತ್ಯಪ್ರೀತಿಯುಳ್ಳ ಜ್ಞಾನದಾಹೀ ಮಕ್ಕಳನ್ನು ಬೆಳೆಸುವುದರತ್ತ ಮಾತ್ರ ಕೇಂದ್ರೀಕರಣಗೊಂಡಿರಬೇಕೇ ಅಥವಾ ಅವರಲ್ಲಿ ಸಾಹಿತ್ಯಾಸಕ್ತಿಯನ್ನು ಬೆಳೆಸುವ ಕೆಲಸ ಮಾಡಬೇಕೇ? ಅಥವಾ ಅಭಿರುಚಿಯನ್ನು ತಿದ್ದಬೇಕೇ? ಒಂದು ಪಠ್ಯದ ಜೊತೆಗಿನ ಪಯಣ ಇವೆಲ್ಲವನ್ನೂ ಏಕಕಾಲಕ್ಕೆ ಮಾಡುತ್ತದೆ.

ಒಂದು ದಿನ ಒಬ್ಬ ಹುಡುಗಿ ಕೇಳಿದ ಪ್ರಶ್ನೆ ಹೀಗಿತ್ತು: 'ಪಠ್ಯಗಳಲ್ಲಿ ಕನ್ನಡ ಭಾಷೆ ಸಾಯುತ್ತಿದೆ ಉಳಿಸಿ, ಎಂಬಂತಹ ಸಂದೇಶವಿರುವ ಲೇಖನಗಳನ್ನು ಸೇರಿಸಿರುತ್ತಾರೆ, ಹೇಗೆ ಓದಲು ಮನಸ್ಸು ಬರುತ್ತದೆ? ಸಾಯುತ್ತಿರುವ ಭಾಷೆಯನ್ನು ಯಾರಾದರೂ ಓದುತ್ತಾರೆಯೆ? ಅದರ ಬದಲು ನಿಜಕ್ಕೂ ಜೀವಂತಿಕೆಯಿರುವ ಕಥೆಯನ್ನೋ, ಕವನವನ್ನೋ, ಪ್ರಬಂಧವನ್ನೋ ಇಟ್ಟರೆ ನಾವೇ ಓದಿಕೊಳ್ಳುತ್ತೇವೆ, ನಾವೇ ರುಚಿ ಹತ್ತಿಸಿಕೊಳ್ಳುತ್ತೇವೆ, ಆಗ ಭಾಷೆ ಹೇಗೆ ಸಾಯುತ್ತದೆ?' ನಾನು ಅವತ್ತು ಏನೂ ಹೇಳದೆ ಕ್ಲಾಸಿಂದ ಹೊರಬರಬೇಕಾಯಿತು. ಮಾರನೆಯ ದಿನ ಒಬ್ಬ ಲೇಖಕನ ಬರವಣಿಗೆ

ಯಲ್ಲಿರುವ ಬೇರೆ ಬೇರೆ ವಿಚಾರಗಳನ್ನು, ಕ್ರಮಗಳನ್ನು ಗ್ರಹಿಸುವ ಬಗೆ ಹೇಗೆಂಬುದರ ಬಗೆಗೆ ಹೇಳಿದೆ. ಇದು ಕೇವಲ ಅಧ್ಯಾಪಕನ ಜವಾಬುದಾರಿ ಮಾತ್ರವಲ್ಲ; ಇಂಥ ವಿಚಾರಗಳೇ ಪಠ್ಯಕ್ರಮದಲ್ಲಿ ಇರಬೇಕು. ಇಂತಿಂಥ ಲೇಖಕರ ಕೃತಿಗಳೇ ಪಠ್ಯವಾಗಿರಬೇಕು, ಇಷ್ಟಿಷ್ಟು ಗಂಟೆಗಳ ಮಿತಿಯಲ್ಲಿ ಪಾಠಮಾಡಬೇಕು ಎನ್ನುವ ನಿಯಮ ರೂಪಿಸುವ ಶಿಕ್ಷಣ ಸಂಸ್ಥೆಗಳ ಮಾನದಂಡಗಳು/ನೀತಿಗಳು ಕೂಡ ಪಠ್ಯಗಳ ಮೂಲಕ ವಿದ್ಯಾರ್ಥಿಗಳ ಸೃಜನಶೀಲ ಮನಸ್ಸಿನ ವಿಕಾಸವನ್ನೇ ಮೊಟಕುಗೊಳಿಸಿಬಿಡಬಹುದು. ಹೀಗಿದ್ದೂ ಒಂದು ಪಠ್ಯದ ಅನುಸಂಧಾನದ ಮೂಲಕ ವಿದ್ಯಾರ್ಥಿಗಳ ಮನೋಪ್ರಪಂಚವನ್ನು ಹೇಗೆ ವಿಸ್ತರಿಸಬೇಕೆಂಬ ಅರಿವಿದ್ದರೆ ಒಬ್ಬ ಸಮರ್ಥ ಅಧ್ಯಾಪಕ ಆ ಜವಾಬುದಾರಿಯನ್ನು ಜಾಣತನದಿಂದ ನಿಭಾಯಿಸಬಲ್ಲ.

ಸಾಹಿತ್ಯದ ಪಠ್ಯ ಸಾಹಿತ್ಯದ ಅನನ್ಯತೆಯನ್ನು ಉಳಿಸಿಕೊಂಡು ಅದರ ಎಲ್ಲ ಆಯಾಮಗಳೊಂದಿಗೆ ಮಾನವೀಯವಾಗಿ ವಿದ್ಯಾರ್ಥಿಗಳ ಎದುರಲ್ಲಿ ಆಕೃತಿ ಪಡೆಯಬೇಕು ಎಂಬುದು ನಮ್ಮೆಲ್ಲರ ನಂಬಿಕೆ. ಇದು ಒಂದು ನೆಲೆಯಲ್ಲಿ ಅರ್ಧನಾರೀಶ್ವರರ ಕಲ್ಪನೆಯಂತೆ. ಅರ್ಧನಾರೀಶ್ವರ ಆಕೃತಿಯಲ್ಲಿ ಬಲಭಾಗ ಶಿವ, ಎಡಭಾಗ ಪಾರ್ವತೀ. ಇದಿಷ್ಟನ್ನೇ ಹೇಳಲು ಯಾವ ಶಿಕ್ಷಕನೂ ಬೇಕಾಗುವುದಿಲ್ಲ. ಬಿಟ್ಟು ಹೋದ ಇನ್ನೆರಡು ಅರ್ಧಗಳಿವೆಯಲ್ಲ, ಅಲ್ಲಿ ಶಿವನ ಬಲಭಾಗ ಪಾರ್ವತಿ, ಎಡಭಾಗ ಶಿವ ಆಗುತ್ತದೆ. ಅಂದರೆ ಶಿವನ ಎಡಭಾಗವೂ ಪಾರ್ವತಿ, ಬಲಭಾಗವೂ ಪಾರ್ವತಿ ಅದು ಶಿವ ಪೂರ್ತಿಯಾಗಿ ಪಾರ್ವತಿಮಯ, ಪಾರ್ವತಿ ಶಿವಮಯ. ಒಂದು ಎರಡಾಗುವ, ಎರಡು ಒಂದಾಗುವ, ಎರಡಾಗಿಯೂ ಭಿನ್ನವಾಗುಳಿಯುವ ಸೋಜಿಗವನ್ನು ವಿದ್ಯಾರ್ಥಿಗಳ ಕಣ್ಣುಗಳಲ್ಲಿ ಕಾಣಿಸಬಲ್ಲೆವಾದರೆ ಆ ಪಠ್ಯದ ಆಕೃತಿ ಸಾರ್ಥಕ.

ಇನ್ನೊಂದು ಮಾತು: ವಿದ್ಯಾರ್ಥಿಗಳು ವಿಭಿನ್ನ ಪರಿಸರದಿಂದ ಬಂದಂತೆ ಅಧ್ಯಾಪಕರೂ ವಿಭಿನ್ನ ಸಾಂಸ್ಕೃತಿಕ ಪರಿಸರದಿಂದ ಬಂದಿರುತ್ತಾರೆ. ಆಗ ತನ್ನ ಸಾಂಸ್ಕೃತಿಕ ಹಿನ್ನೆಲೆಯ ಪ್ರಭಾವ ತರಗತಿಯಲ್ಲಿ ಋಣಾತ್ಮಕ ಪರಿಣಾಮ ಉಂಟುಮಾಡದಂತೆ ಅಧ್ಯಾಪಕ ಎಚ್ಚರಿಕೆ ವಹಿಸಬೇಕು. ಉದಾಹರಣೆಗೆ ಯಾವುದೋ ಒಂದು ವಿಚಾರಧಾರೆಯ ಹಿನ್ನೆಲೆಯಿರುವ ಅಧ್ಯಾಪಕ ಆ ವಿಚಾರಧಾರೆಯ ವ್ಯಕ್ತಿಗಳನ್ನು/ಪಠ್ಯಗಳನ್ನು ಹೆಚ್ಚು ಆಸಕ್ತನಾಗಿ ಪಾಠ ಮಾಡಬಹುದು. ಆಗ ಹೊಸವಿಚಾರಧಾರೆ, ಅನುಭವಕ್ಕೆ ತೆರೆದುಕೊಳ್ಳುವ ಹಂತದ ವಿದ್ಯಾರ್ಥಿಗಳು ಆ ಅಧ್ಯಾಪಕರ ವಿಚಾರಧಾರೆಗೆ ಮರುಳಾಗಿ ಅಂಥದೇ ವಿಚಾರಧಾರೆಯನ್ನು ಬೆಳೆಸಿಕೊಳ್ಳಬಹುದು. ಅಂದರೆ ಅಧ್ಯಾಪಕನಾಗಿದ್ದವನು ಯಾವುದೇ ತತ್ವ, ವಾದ, ಸಿದ್ಧಾಂತಗಳಿಗೆ ಬದ್ಧನಾಗಿರಬಾರದೇ? ಎಂದರೆ ಅವನು ವೈಯಕ್ತಿಕವಾಗಿ ಯಾವುದೇ ವಾದ ಸಿದ್ಧಾಂತಕ್ಕೆ ಬದ್ಧನಾಗಿದ್ದೂ ಎಲ್ಲ ವಾದ ತತ್ತ್ವ ಸಿದ್ಧಾಂತಗಳ ಸಾಧ್ಯತೆ ಮತ್ತು ಮಿತಿಯನ್ನು ಯಾವುದೇ ಪೂರ್ವಾಗ್ರಹವಿಲ್ಲದೆ ಬೋಧಿಸುವಂಥವನಾಗಿರಬೇಕು. ಹಿಂದೆ ಇಂಥ ಸಂಪ್ರದಾಯವಿದ್ದುದನ್ನು ನಾವು ಗಮನಿಸಬೇಕು. ನಾವು ಕಲಿಯುತ್ತಿದ್ದ ಕಾಲದಲ್ಲಿ ಮುಸ್ಲಿಂ ಸಮುದಾಯದ ಅಧ್ಯಾಪಕರೊಬ್ಬರು, ಸಂಸ್ಕೃತ ಶ್ಲೋಕಗಳನ್ನು, ವಚನಗಳನ್ನು ತುಂಬಾ ಸ್ವಾರಸ್ಯಕರವಾಗಿ ಬೋಧಿಸುತ್ತಿದ್ದುದು ನಮ್ಮ ಗಮನಕ್ಕೆ ಬರುತ್ತಿತ್ತು. ಜೈನ ಸಮುದಾಯದ ಆಚರಣೆಗಳ

ಬಗೆಗೆ ಆ ಸಮುದಾಯದ ಹಿನ್ನೆಲೆ ಪರಿಚಯವಿಲ್ಲದ ಅನೇಕ ವಿದ್ವಾಂಸರು ಜೈನ ಧರ್ಮದ ಬಗೆಗೆ ವಿಶೇಷ ಕೆಲಸ ಮಾಡಿರುವುದನ್ನು ನಾವು ನೋಡಬಹುದು. ಇದು ಉದಾಹರಣೆ ಅಷ್ಟೆ. ಯಾವ ಧರ್ಮ, ಸಮುದಾಯ, ಸಂಸ್ಕೃತಿಗಳ ಬಗೆಗೂ ಈ ಮಾತು ಅನ್ವಯವಾಗುತ್ತದೆ. ಅಂದರೆ ಪಠ್ಯವೆಂಬುದು ಶಿಕ್ಷಕನು ಅವನ ವೈಯುಕ್ತಿಕವಾದ ನಂಬಿಕೆ, ವಿಚಾರಗಳಿಂದ ಭಿನ್ನವಾದ ಮತ್ತು ಸಂವಿಧಾನದ ಆಶಯಗಳ ಹಿನ್ನೆಲೆಯಲ್ಲಿ ಪ್ರಜಾಪ್ರಭುತ್ವೀಯ ನೆಲೆಯಲ್ಲಿ ಬೋಧಿಸಬೇಕು. ಹಾಗಿಲ್ಲದಾದಾಗ ಪಠ್ಯ ಎನ್ನುವುದು ಅದರ ಉದ್ದೇಶದಿಂದ ಬೇರೆ ಸರಿದುಬಿಡುವ ಸಂಭವವಿದೆ.

ಇನ್ನೂ ಕೆಲವು ವೇಳೆ ಸಾಹಿತ್ಯ ಕೃತಿಗಳನ್ನು ಒಂದು ನಿರ್ದಿಷ್ಟ ಚಳುವಳಿಯ ಹಿನ್ನೆಲೆಯಲ್ಲಿ ನೋಡುವ ಪರಿಪಾಟ ಬಹಳ ಹಿಂದಿನಿಂದಲೂ ಬೆಳೆದುಬಂದಿದೆ. ಹಾಗಾದಾಗಲೂ ಕೂಡ ಆ ಪಠ್ಯವನ್ನು ಕೇವಲ ಆ ಚಳುವಳಿಗೆ ಮಿತಿಗೊಳಿಸಿ ನೋಡುವದಾಗಿಬಿಡುತ್ತದೆ. ದೇವನೂರ ಮಹಾದೇವರ ಕೃತಿಗಳನ್ನು ದಲಿತ ಸಾಹಿತ್ಯ ಚಳುವಳಿಯ ಹಿನ್ನೆಲೆಯಲ್ಲಿ ವಿವರಿಸಿಕೊಳ್ಳುವದಕ್ಕಿಂತ ಒಟ್ಟು ಸಾಹಿತ್ಯ ಪರಂಪರೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಅದರ ವ್ಯಾಪ್ತತೆ ಹೆಚ್ಚಿರುತ್ತದೆ. ಎಚ್.ಎ. ಅನಿಲ್ ಕುಮಾರ್ ಅವರು ದೇವನೂರರ ಒಡನಾಳ ಕೃತಿ ಮತ್ತು ಪ್ರಸಿದ್ಧ ಕಲಾವಿದ್ ವ್ಯಾನ್‌ಗೋನ 'ಪೊಟೋಟೋ ಈಟರ್ಸ್' ಕಲಾಕೃತಿಯನ್ನು ತೌಲನಿಕವಾಗಿ ನೋಡಿರುವ ಪ್ರಯತ್ನವನ್ನು ನಾವು ಗಮನಿಸಬೇಕು (**ಯಾರಜಪ್ತಿಗೂ ಸಿಗದ ನವಿಲುಗಳು**–ದೇವನೂರ ಸಾಹಿತ್ಯ ಕುರಿತಂತೆ. ಸಂ. ಪಿ. ಚಂದ್ರಿಕಾ, ಅಭಿನವ, ಬೆಂಗಳೂರು)

ಸಾಹಿತ್ಯದ ವಾದಗಳು, ಸಿದ್ಧಾಂತಗಳು, ನಂಬಿಕೆಗಳು ಏನೇ ಇರಲಿ, ಸಾಹಿತ್ಯಕ್ಕೆ ತನ್ನದೇ ಆದ ಸ್ವಂತ ವ್ಯಕ್ತಿತ್ವವಿದೆ, ಬಣ್ಣವಿದೆ, ವಾಸನೆ, ದರ್ಶನ ಮತ್ತು ಕಾಣ್ಕೆಗಳೂ ಇರುತ್ತವೆ. ಆ ಬಗೆಗೆ ಗಮನ ಸದಾ ಅಧ್ಯಾಪಕನಿಗೆ ಇರಬೇಕು. ಸಾಹಿತ್ಯವನ್ನು ಸದ್ಯದ ಹಂಗಿಗೆ ಒಳಪಡಿಸುವ ಧಾವಂತದಲ್ಲಿ ಅದರ ಕಲಾತ್ಮಕ ಅಭಿವ್ಯಕ್ತಿಗೆ ಧಕ್ಕೆಯಾಗದಂತೆಯೂ, ಕಲಾತ್ಮಕತೆಯ ಹಂಗಿನಲ್ಲಿ ಅದರ ಸಾರ್ವತ್ರಿಕತೆಗೆ ಮತ್ತು ಸದ್ಯಕ್ಕೆ ಸಲ್ಲಬೇಕಾದುದರಿಂದ ಹೊರಗೆ ನಿಲ್ಲುವಂತೆ ನೋಡಿಕೊಳ್ಳುವಲ್ಲಿ ಅಧ್ಯಾಪಕ ಕ್ರಿಯಾಶೀಲನಾಗಬೇಕು.

ಒಟ್ಟಿನಲ್ಲಿ 'ಪಠ್ಯ' ಎನ್ನುವುದು ಒಂದು ಬ್ಲಾಂಕ್ ಚೆಕ್ ಇದ್ದಹಾಗೆ. ಅದರಲ್ಲಿ ಅಧ್ಯಾಪಕನಾದಂಥವನು ಎಷ್ಟು ಮೌಲ್ಯದ ಹಣವನ್ನಾದರೂ ಬರೆಯಬಹುದು. ಹತ್ತು ರೂಪಾಯಿಗಳನ್ನಾದರೂ ಬರೆಯಬಹುದು, ನೂರು, ಸಾವಿರ, ಲಕ್ಷ, ಕೋಟಿ ರೂಪಾಯಿಗಳನ್ನಾದರೂ ಬರೆಯಬಹುದು. ಅದರ ನಗದೀಕರಣ ವಿದ್ಯಾರ್ಥಿಗಳದ್ದು. ಸಹಿಯಿಲ್ಲದ ಚೆಕ್, ಹಣದ ಸರಿಯಾದ ಕ್ರಮದ ನಿರೂಪಣೆಯಿಲ್ಲದ ಚೆಕ್‌ನಿಂದ ಯಾವ ಪ್ರಯೋಜನವೂ ಇಲ್ಲ. ಜೊತೆಗೆ ಅದರ ನಗದೀಕರಣವೂ ಒಂದು ಕಾಲಘಟ್ಟ ದಲ್ಲಿಯೇ ಆಗಬೇಕು ಎಂಬುದು ಇಲ್ಲಿ ಮುಖ್ಯ.

ಪಠ್ಯದ ಆಕೃತಿಯನ್ನು ಪ್ರಸ್ತುತಪಡಿಸುವಾಗ ಶಿಕ್ಷಕ, ಬರಿಗೊಡದ ಸಮಾಧಾನ ವಾಗಬಾರದು, ತುಂಬುಗೊಡದ ಅಭಿಮಾನವಾಗಬೇಕು ಎಂಬುದು ಸದಾಶಯ.

(ಎ.ಪಿ.ಎಸ್. ವಾಣಿಜ್ಯ ಕಾಲೇಜಿನಲ್ಲಿ ಏರ್ಪಡಿಸಿದ್ದ ಎರಡು ದಿನಗಳ ವಿಚಾರಸಂಕಿರಣದಲ್ಲಿ ಓದಿದ ಪ್ರಬಂಧದ ವಿಸ್ತೃತ ಬರಹ) ■

# ಡಾ. ಬಿ.ಆರ್. ಅಂಬೇಡ್ಕರ್ ದೃಷ್ಟಿಯಲ್ಲಿ ಮೀಸಲಾತಿ ಯೋಜನೆ



ಡಾ. ಪ್ರಮೀಳಾ ಮಾಧವ್

## ಹಿನ್ನೆಲೆ

ಭಾರತ ಅತ್ಯಂತ ಸನಾತನವಾದ ಸಂಸ್ಕೃತಿ, ಧರ್ಮ, ಇತಿಹಾಸಗಳುಳ್ಳ ರಾಷ್ಟ್ರವಾದರೂ ಶ್ರೇಣೀಕೃತ ವ್ಯವಸ್ಥೆಯಲ್ಲಿ ಬದುಕು ಸಾಗಿಸುತ್ತಿದ್ದ ಈ ಸಮಾಜದ ಒಂದು ಭಾಗದ ಜನರು ಶತಶತಮಾನಗಳಿಂದಲೂ ಅಮಾನವೀಯವಾದ ಕಟ್ಟುಪಾಡುಗಳ ಸಂಕೋಲೆಯೊಳಗೆ ಅಸ್ಪೃಶ್ಯರೆನಿಸಿ ಬದುಕುತ್ತಿದ್ದರು. ವೈಚಾರಿಕ ಮನೋಭಾವವುಳ್ಳವರು, ಸಮಾಜ ಸುಧಾರಕರು ಇದನ್ನು ಪ್ರತಿರೋಧಿಸುತ್ತಿದ್ದರೂ ಸಮಾಜದ ವ್ಯವಸ್ಥೆಯಲ್ಲಿ ಯಾವುದೇ ಸುಧಾರಣೆಯಾಗಿರಲಿಲ್ಲ. ೧೯-೨೦ನೆಯ ಶತಮಾನದಿಂದ ಈ ಪ್ರತಿರೋಧ ಶೋಷಿತ ಸಮುದಾಯದಿಂದಲೂ ತೀವ್ರವಾಗತೊಡಗಿ ಸರಕಾರವೂ ಆ ದಿಸೆಯಲ್ಲಿ ಜಾಗೃತವಾಯ್ತು. ಸಮಾಜದ ಅವಿಭಾಜ್ಯ ಅಂಗವಾಗಿರುವ ತಿರಸ್ಕೃತ ಸಮುದಾಯಗಳು ಸಮಾಜದ ಮುಖ್ಯವಾಹಿನಿಯೊಂದಿಗೆ ಸಮರಸಗೊಳ್ಳುವುದು ಮಾನವೀಯತೆಯ ದೃಷ್ಟಿಯಿಂದ ಮಾತ್ರವಲ್ಲ ಇತರ ಕಾರಣಗಳಿಂದಲೂ ಸರಕಾರಕ್ಕೆ ಮುಖ್ಯವಾಗಿತ್ತು. ಇದರ ಪರಿಣಾಮವಾಗಿ ಸ್ವಾತಂತ್ರ್ಯಪೂರ್ವದಲ್ಲೇ ತಳಸಮುದಾಯದವರಿಗೆ ನಾಗರಿಕ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಮೀಸಲಾತಿಯ ಪ್ರಯತ್ನಗಳು, ಕಾರ್ಯಕ್ರಮಗಳು ರೂಪಿತವಾಗತೊಡಗಿದ್ದುವು. ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಬಳಿಕ ಸಂವಿಧಾನದ ಮೂಲಕ ಮೀಸಲಾತಿಯನ್ನು ಕಾನೂನುಬದ್ಧವಾಗಿ ಜಾರಿಗೊಳಿಸಲಾಯ್ತು. ಕೇಂದ್ರ ಸರಕಾರ ಸರಕಾರ ಹಾಗೂ ಸರಕಾರೀ ಅನುದಾನಿತ ಶಿಕ್ಷಣ ಸಂಸ್ಥೆ ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ಉನ್ನತ ಶಿಕ್ಷಣ, ಉದ್ಯೋಗ ಮತ್ತು ಇತರ ಸೌಲಭ್ಯಗಳಿಗಾಗಿ ಶೇಕಡಾ ೨೭% ಮೀಸಲಾತಿಯನ್ನು (೧೫% ಪರಿಶಿಷ್ಟ ಜಾತಿಗಳಿಗೆ ಮತ್ತು ೧೨.೫% ಪರಿಶಿಷ್ಟ ಪಂಗಡಗಳಿಗೆ) ನಿಗದಿಪಡಿಸಿತು.

ಮೀಸಲಾತಿ ಅಂದರೆ ಕಾದಿರಿಸುವಿಕೆ ಅಥವಾ ಪ್ರಾತಿನಿಧ್ಯವನ್ನು ನೀಡುವುದು ಎಂದರ್ಥ. ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಔದ್ಯೋಗಿಕ ಮುಂತಾದ ಕ್ಷೇತ್ರಗಳಲ್ಲಿ ಅವಕಾಶ ವಂಚಿತರಾದ ತಳಸಮುದಾಯದ ಮತ್ತು ತಿರಸ್ಕೃತ ವರ್ಗದ ಜನರಿಗೆ ಸೂಕ್ತ ಅವಕಾಶಗಳನ್ನು ಕೊಟ್ಟು ಅವರನ್ನು ಸಮಾಜದ ಉಳಿದ ಜನವರ್ಗದವರೊಂದಿಗೆ ಸಮಾನವಾಗಿ ಪರಿಗಣಿಸುವುದಕ್ಕಿರುವ ಒಂದು ಯೋಜನೆಯೇ ಮೀಸಲಾತಿ ಯೋಜನೆ. ಮೀಸಲಾತಿ ಒಬ್ಬ ವ್ಯಕ್ತಿ ತನ್ನ ಯೋಗ್ಯತೆಯಿಂದ ಗಳಿಸುವುದಲ್ಲ. ಅದು ವ್ಯಕ್ತಿಯ ಬದುಕನ್ನು ಮತ್ತು ಅವನಂತೆ ನಾಗರಿಕ ಸೌಲಭ್ಯಗಳಿಂದ ವಂಚಿತರಾದ ಇಡೀ ಸಮುದಾಯದ ಬದುಕನ್ನು ಹಸನುಗೊಳಿಸಲಿರುವ ವಿಶೇಷ ಸವಲತ್ತುಗಳು.

**ಯೋಜನೆಯ ಮೊದಲ ಹೆಜ್ಜೆಗಳು**

೧೯–೨೦ನೆಯ ಶತಮಾನದಲ್ಲಿ ದಲಿತರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವ ಸಲುವಾಗಿ ದೇಶದಾದ್ಯಂತ ಜಾಗೃತಿಯ ಅಲೆಯನ್ನು ಮೂಡಿಸಿ ನಿಮ್ನವರ್ಗದ ಉದ್ಧಾರಕ್ಕಾಗಿಯೇ ಬದುಕನ್ನು ಮೀಸಲಾಗಿರಿಸಿದ ಅನೇಕ ದಲಿತ ಹಾಗೂ ದಲಿತೇತರ ಮಹಾನುಭಾವರಲ್ಲಿ ಮಹಾರಾಷ್ಟ್ರದ ಜ್ಯೋತಿರಾವ್ ಗೋವಿಂದರಾವ್ ಫುಲೆ, ಸಾವಿತ್ರೀಬಾಯಿ ಫುಲೆ, ಅಯ್ಯನ್ ಕಾಳಿ ಮುಂತಾದವರು ಪ್ರಮುಖರಾಗಿದ್ದರೂ ಜಾತೀಯತೆ ಮತ್ತು ಮೀಸಲಾತಿಗೆ ಸಂಬಂಧಿಸಿದಂತೆ ನಮ್ಮ ಆಲೋಚನೆಯ ಪದರಗಳು ಬಿಚ್ಚುವುದು ಡಾ. ಬಿ.ಆರ್. ಅಂಬೇಡ್ಕರ್ ಅವರ ವಿಚಾರಧಾರೆಗಳ ಮೂಲಕವೇ. ಅಂಬೇಡ್ಕರ್ ಪೂರ್ವದ ಸರಕಾರೀಯೋಜನೆಗಳು ಮೀಸಲಾತಿಯ ಸೌಲಭ್ಯಗಳನ್ನು ಕಲ್ಪಿಸಿದ್ದರೂ ಅವುಗಳೆಲ್ಲ ಬಕಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಂತೆ ತಾತ್ಕಾಲಿಕ ಉಪಶಮನವಾಗಿತ್ತೇ ವಿನಾ ಅಸ್ಪೃಶ್ಯರ ಸಮಸ್ಯೆಗಳನ್ನು ಮೂಲೋತ್ಪಾಟನಗೊಳಿಸುವಲ್ಲಿ ಶಾಶ್ವತ ಪರಿಹಾರವಾಗಿರಲಿಲ್ಲ. ಮಾತ್ರವಲ್ಲ ಅನೇಕ ಯೋಜನೆಗಳು ಸರಕಾರೀ ಕಡತದೊಳಗೆ ಕುಂಭಕರ್ಣನಿದ್ರೆಯಲ್ಲಿ ಮುಳುಗಿದ್ದುವು. ಶಸ್ತ್ರಕ್ರಿಯೆಯಿಂದ ನಿವಾರಣೆಯಾಗಬೇಕಾದ ಕಾಯಿಲೆಗೆ ಚುಚ್ಚುಮದ್ದು ನೀಡುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಖಾತ್ರಿ ಮಾಡಿಕೊಂಡೇ ಅಂಬೇಡ್ಕರ್‌ರವರು ಮೀಸಲಾತಿ ಯೋಜನೆಯನ್ನು ಕಾನೂನುಬದ್ಧ ಮಾಡಿಸುವುದರ ಮೂಲಕ ಶಾಶ್ವತ ಪರಿಹಾರವನ್ನು ಕಂಡುಹಿಡಿಯಲು ಕಟಿಬದ್ಧರಾದರು. ವಿದ್ಯೆ, ಬುದ್ಧಿ, ಪದವಿ, ಅಧಿಕಾರ, ಯೋಗ್ಯತೆಗಳಿದ್ದರೂ ಅಸ್ಪೃಶ್ಯರಾಗಿ ಹುಟ್ಟಿದ ಒಂದೇಒಂದು ಕಾರಣಕ್ಕಾಗಿ ಸಮಾಜದ ಮೇಲುವರ್ಗದವರಿಂದ ಸತತವಾಗಿ ಅನುಭವಿಸಿದ ಅಸ್ಪೃಶ್ಯತೆಯ ಘೋರ ಯಾತನೆ, ಅವಮಾನಗಳು ಅಂಬೇಡ್ಕರ್‌ರವರನ್ನು ಸವರ್ಣೀಯರ ವಿರುದ್ಧ ಎತ್ತಿಕಟ್ಟಿದುವು.

೧೮೯೧ ಎಪ್ರಿಲ್ ೧೪ರಂದು ಮಹಾರಾಷ್ಟ್ರದ ದಲಿತ ಕುಟುಂಬವೊಂದರಲ್ಲಿ ಜನಿಸಿದ ಡಾ. ಬಿ.ಆರ್. ಅಂಬೇಡ್ಕರ್ ಅಸಮಾನತೆ, ಅವಮಾನಗಳ ಬೆಂಕಿಯಲ್ಲಿ ಕುದಿಗೊಂಡು ಮೇಲೆ ಬಂದವರು.ಭಾರತದ ಅಸ್ಪೃಶ್ಯರ ಬದುಕು ಈಜಿಪ್ಟ್‌ನ ಇಸ್ರೇಲಿಗಳಿಗಿಂತ, ಜರ್ಮನಿಯ ಜ್ಯೂಗಳಿಗಿಂತ, ಅಮೇರಿಕದ ನೀಗ್ರೋಗಳಿಗಿಂತ

ಭಯಂಕರವಾಗಿತ್ತು ಎನ್ನುವುದು ಅವರ ಅಭಿಪ್ರಾಯವಾಗಿತ್ತು. ವಿದ್ಯೆ, ವಿವೇಕಗಳಿಂದ ತಿದ್ದಿತೀಡಿದ ಅವರ ವ್ಯಕ್ತಿತ್ವದಲ್ಲಿ ಗುಣ, ನಡತೆ, ಪದವಿ, ಯೋಗ್ಯತೆಗಳಿದ್ದುವು. ಆದರೆ ಅವು ಯಾವುದೂ ಅವರನ್ನು ಅಸ್ಪೃಶ್ಯತೆಯ ಬೆಂಕಿಯಿಂದ ಪಾರುಮಾಡಲಿಲ್ಲ. ಅವರ ಕೈಕೆಳಗೆ ಕೆಲಸ ಮಾಡುತ್ತಿದ್ದ ಸವರ್ಣೀಯ ಸಿಬ್ಬಂದಿಗಳೂ ಅಸ್ಪೃಶ್ಯರೆಂಬ ಕಾರಣಕ್ಕೆ ಕಿರುಕುಳ ಕೊಡುತ್ತಿದ್ದರು. ಬಗೆಬಗೆಯ ಅವಮಾನ, ಭರ್ತ್ಸನೆ, ತಿರಸ್ಕಾರಗಳಿಗೆ ಗುರಿಯಾದ ಅಂಬೇಡ್ಕರ್‌ಗೆ ಯಾವುದೇ ಉದ್ಯೋಗದಲ್ಲಿ ಮುಂದುವರಿಯಲಾಗದೆ ಮನಸ್ಸಿನಲ್ಲಿ ಕುದಿಯುತ್ತಿದ್ದ ನೋವು ಅಭಿವ್ಯಕ್ತಿಗೆ ಹಾತೊರೆಯುತ್ತಿದ್ದಾಗಲೇ ೧೯೧೯ರಲ್ಲಿ 'ಸೌತ್ಬರೋ ಕಮಿಟಿ' ರಚನೆಯಾಗಿ ಅದರ ಪ್ರತಿನಿಧಿಗಳು ಭಾರತಕ್ಕೆ ಬಂದರು. ಈ ಕಮಿಟಿಯಿಂದ ಆಹ್ವಾನಿತರಾದ ಅಂಬೇಡ್ಕರ್‌ರವರು ತಳಸಮುದಾಯದವರು ಅನುಭವಿಸುತ್ತಿರುವ ಅವಮಾನಗಳ ಬಗ್ಗೆ, ಅವರಿಗೆ ನ್ಯಾಯಯುತವಾಗಿ ಸಿಗಬೇಕಾದ ಮಾನವ ಹಕ್ಕುಗಳ ಬಗ್ಗೆ ವಾದಿಸಿ ತಮ್ಮ ಬೇಡಿಕೆಗಳನ್ನು ಯಥೋಚಿತವಾಗಿ ಸಮರ್ಥಿಸಿ ಪ್ರತ್ಯೇಕ ಚುನಾವಣೆ ಮತ್ತು ಮೀಸಲಾತಿಗೆ ಸಂಬಂಧಿಸಿದಂತೆ ತಮ್ಮ ವಿಚಾರಪ್ರಣಾಲಿಕೆಯನ್ನು ಸರಕಾರದ ಗಮನಕ್ಕೆ ತಂದರು. ಇದೇ ವಿಷಯವನ್ನು ಕುರಿತು 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಒಂದು ಲೇಖನವನ್ನೂ ಪ್ರಕಟಿಸಿದರು. ತಮ್ಮ ಚಿಂತನೆ ಮತ್ತು ಯೋಜನೆಗಳನ್ನು ಸಾರ್ವತ್ರಿಕಗೊಳಿಸುವ ಸಲುವಾಗಿ ಕೊಲ್ಲಾಪುರದ ಸಾಹುಮಹಾರಾಜರ ನೆರವನ್ನು ಪಡೆದು ೧೯೨೦ರಲ್ಲಿ 'ಮೂಕನಾಯಕ' ಎಂಬ ಪತ್ರಿಕೆಯನ್ನೇ ಪ್ರಾರಂಭಿಸಿದರು. ಅದರಲ್ಲಿ ಅಸ್ಪೃಶ್ಯರಿಗೆ ಶಿಕ್ಷಣವನ್ನು ನೀಡುವುದರ ಮೂಲಕ ಅವರನ್ನು ಸಮಾಜದ ಮುಖ್ಯವಾಹಿನಿಯೊಂದಿಗೆ ಸಮರಸಗೊಳಿಸಬೇಕಾದ ಅಗತ್ಯತೆಯ ಬಗ್ಗೆ ಗಂಭೀರವಾದ ಚಿಂತನೆಗಳನ್ನು ಪ್ರಕಟಿಸತೊಡಗಿದರು. 'ಭಾರತ ಭೌಗೋಲಿಕ ಸ್ವಾತಂತ್ರ್ಯವನ್ನು ಪಡೆದರಷ್ಟೇ ಸಾಲದು. ಅಲ್ಲಿನ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಕ್ಕುಗಳು ಜಾತಿ, ಮತ, ಭೇದವಿಲ್ಲದೆ ಸರ್ವರಿಗೂ ಸಮಾನವಾಗಿ ದೊರಕುವಂತಾಗಬೇಕು. ಆಗ ಮಾತ್ರ ಭಾರತ ಸಶಕ್ತರಾಷ್ಟ್ರವಾಗಿ ಹೊರಹೊಮ್ಮಲು ಸಾಧ್ಯ. ಜೀವನದಲ್ಲಿ ಉನ್ನತ ಸ್ಥಾನಕ್ಕೆ ಹೋಗುವ ಹಾಗೂ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವ ಅವಕಾಶ ಇಲ್ಲಿನ ಪ್ರತಿಯೊಬ್ಬರಿಗೂ ಸಿಕ್ಕಬೇಕು. ಬ್ರಿಟಿಷರು ಹೇರಿದ ನೂರು ವರ್ಷಗಳ ಗುಲಾಮಗಿರಿಯನ್ನು ವಿರೋಧಿಸುವುದು ಹಾಗೂ ಅದರಿಂದ ಹೊರಬರುವುದು ಭಾರತೀಯರೆಲ್ಲರ ಆದ್ಯಕರ್ತವ್ಯ ಎಂಬುದನ್ನು ಮಾನ್ಯ ಮಾಡುವುದಾದರೆ ಸಹಸ್ರಾರು ವರ್ಷಗಳಿಂದ ಬ್ರಾಹ್ಮಣರು ಹೇರಿದ ಗುಲಾಮಗಿರಿಯನ್ನು ವಿರೋಧಿಸುವುದು ಹಾಗೂ ಅದರಿಂದ ಹೊರಬರುವುದು ಎಲ್ಲಾ ಬ್ರಾಹ್ಮಣೇತರರ ಹಾಗೂ ಅಸ್ಪೃಶ್ಯರ ಆದ್ಯಕರ್ತವ್ಯ ಎಂಬುದನ್ನು ಮಾನ್ಯ ಮಾಡಬೇಕಾಗುತ್ತದೆ. ನೂರು ವರ್ಷಗಳಿಂದ ಗುಲಾಮರಾಗಿರುವ ಬ್ರಾಹ್ಮಣರು ಬ್ರಿಟಿಷರನ್ನು ಒದ್ದೋಡಿಸಲು ಮುಂದಾಗುವ ಮುನ್ನ ಶತಮಾನಗಳಿಂದ ತಾವು ಇತರರನ್ನು ಗುಲಾಮರನ್ನಾಗಿ ಇಟ್ಟುಕೊಂಡಿರುವುದಕ್ಕೆ ಸಮಜಾಯಿಷಿಯನ್ನು ನೀಡಬೇಕಾಗುತ್ತದೆ.' (ಸಂಘರ್ಷ: ಪು. ೪೫–೪೬) ಎಂಬುದು ಅವರವಾದವಾಗಿತ್ತು.

ಸಂಘಟನೆಯ ಮೂಲಕ ಖುದ್ದಾಗಿ ಕ್ರಿಯಾರಂಗಕ್ಕೆ ಧುಮುಕಿ ಅಸ್ಪೃಶ್ಯರ ಚಟುವಟಿಕೆಗಳನ್ನು ತೀವ್ರಗೊಳಿಸದಿದ್ದರೆ ತಮ್ಮ ಯೋಜನೆಗಳು ಯಾವುದೂ ಕಾರ್ಯರೂಪಕ್ಕೆ ಬರಲಾರದೆಂದು ಖಚಿತವಾಗಿ ತಿಳಿದ ಅಂಬೇಡ್ಕರ್‌ರವರು ೧೯೨೪, ಜುಲೈ ೨೦ರಂದು 'ಬಹಿಷ್ಕೃತ ಹಿತಕಾರಿಣೀಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ನಿಮ್ನ ಸಮುದಾಯವನ್ನು ಆರ್ಥಿಕವಾಗಿಯೂ ಶೈಕ್ಷಣಿಕವಾಗಿಯೂ ಸಬಲೀಕರಣಗೊಳಿಸಲು ಎಲ್ಲ ಬಗೆಯ ಪ್ರಯತ್ನಗಳನ್ನೂ ಕೈಗೊಂಡರು.

೧೯೨೭ರಿಂದ ಅಸ್ಪೃಶ್ಯತೆಯ ವಿರುದ್ಧ ಆಂದೋಲನವನ್ನು ಪ್ರಾರಂಭಿಸಿದ ಅಂಬೇಡ್ಕರ್‌ರವರು ಭಾಷಣ, ಸಭೆ, ಸತ್ಯಾಗ್ರಹ, ಮೆರವಣಿಗೆಗಳ ಮೂಲಕ ನಿಮ್ನವರ್ಗದ ಜನರಲ್ಲಿ ಜಾಗೃತಿ, ಆತ್ಮವಿಶ್ವಾಸ, ಆತ್ಮಗೌರವಗಳನ್ನು ತುಂಬುತ್ತ ಚಳುವಳಿಯನ್ನು ಬಲಪಡಿಸಿದರು. ಸಾರ್ವಜನಿಕರು ಬಳಸುವ ನಲ್ಲಿ, ಬಾವಿಗಳಿಂದ ನೀರು ಸೇದುವ ಹಕ್ಕು, ದೇವಸ್ಥಾನ ಪ್ರವೇಶಿಸುವ ಹಕ್ಕು ಮುಂತಾಗಿ ಹಕ್ಕೊತ್ತಾಯವನ್ನು ಮಂಡಿಸುತ್ತ ತಮ್ಮ ಆಂದೋಲನವನ್ನು ಹುರಿಗೊಳಿಸಿದರು. ಮಹಾಡ್‌ನ ಚೌಡಾರ್ ಕೆರೆಯ ಪ್ರಕರಣದಿಂದ ಆಪಾದನೆಗಳ ಪ್ರಹಾರಕ್ಕೆ ಎದೆಯೊಡ್ಡಬೇಕಾದಾಗ ಅವರು ಮತ್ತೆ ಪತ್ರಿಕೆಗಳ ಮೊರೆಹೋದರು. ೧೯೨೭ರಲ್ಲಿ ಸ್ಥಾಪಿಸಿದ 'ಬಹಿಷ್ಕೃತ ಭಾರತ' ಎಂಬ ವಾರಪತ್ರಿಕೆಯ ಮೂಲಕ ಅಸ್ಪೃಶ್ಯ ಸಮುದಾಯಕ್ಕೆ ಶಿಕ್ಷಣ ಮತ್ತು ಮೀಸಲಾತಿಗೆ ಸಂಬಂಧಿಸಿದಂತೆ ತಮ್ಮ ವಿಚಾರ ಪ್ರಣಾಳಿಕೆಗೆ ಹೊಸ ಚಾಲನೆ ಮತ್ತು ಆಯಾಮವನ್ನು ನೀಡಲು ಅವರಿಗೆ ಸಾಧ್ಯವಾಯ್ತು. ಪ್ರಸಕ್ತ ಸ್ಥಿತಿಯಲ್ಲಿ ಅಸ್ಪೃಶ್ಯರನ್ನು ಮುಖ್ಯವಾಹಿನಿಗೆ ತರಬೇಕಿದ್ದರೆ ಮೀಸಲಾತಿ ಅನಿವಾರ್ಯವೆಂದೂ 'ಅಸಮಾನ ಮಟ್ಟದಲ್ಲಿರುವ ಸಮುದಾಯವನ್ನು ಸಮಾನ ಮಟ್ಟಕ್ಕೆ ತರಬೇಕಾದರೆ ಅಸಮಾನ ಮಾನದಂಡಗಳನ್ನು ಬಳಸಬೇಕೆಂದೂ ಹಿಂದುಳಿದ ಮತ್ತು ನಮ್ಮ ವರ್ಗದ ಮಕ್ಕಳಿಗೆ ವಿಶೇಷ ಶಿಕ್ಷಣ ಸೌಲಭ್ಯವನ್ನು ಒದಗಿಸದೆ ಹೋದರೆ ಭಾರತದೇಶದ ಎಲ್ಲಾ ಮಕ್ಕಳು ಶೈಕ್ಷಣಿಕವಾಗಿ ಸಮಾನ ಮಟ್ಟಕ್ಕೆ ಬರುವುದು ಸಾಧ್ಯವಾಗುವುದೇ ಇಲ್ಲ' (ಅದೇ. ಪು ೬೧)ವೆಂದೂ ಅವರು ಪ್ರತಿಪಾದಿಸತೊಡಗಿದರು.

೧೯೨೫ರಲ್ಲಿ ಸರ್ ಜಾನ್ ಸೈಮನ್ ಅಧ್ಯಕ್ಷತೆಯಲ್ಲಿ 'ಸೈಮನ್ ಕಮಿಷನ್' ಎಂಬ ಆಯೋಗ ರಚಿತವಾಯ್ತು. ಆಯೋಗದ ಚಟುವಟಿಕೆಗಳಿಗೆ ನೆರವಾಗುವ ಹಿನ್ನಲೆಯಲ್ಲಿ ಬ್ರಿಟಿಷ್ ಕೇಂದ್ರ ಸರಕಾರ ೧೯೨೮ರಲ್ಲಿ ಮುಂಬೈ ಪ್ರಾಂತೀಯ ಸಮಿತಿಯನ್ನು ನೇಮಿಸಿತು. ಅದರಲ್ಲಿ ಅವಕಾಶ ಪಡೆದ ಅಂಬೇಡ್ಕರ್‌ರವರು ಇಡೀ ದೇಶದ ಬಹುಮತೀಯರ ಮುಂದೆ ಅಪರಾಧಿ ಎನಿಸಿದರೂ ಧೃತಿಗೆಡದೆ ಅಸ್ಪೃಶ್ಯ ಸಮುದಾಯಕ್ಕೆ ಸಲ್ಲಬೇಕಾಗಿದ್ದ ಹಕ್ಕುಬಾಧ್ಯತೆಗಳನ್ನು ಕಮಿಷನಿನ ವರದಿಯಲ್ಲಿ ಸೇರ್ಪಡೆಗೊಳಿಸಲು ಪ್ರಯತ್ನಶೀಲರಾದರು. ತಾವು ಈಗಾಗಲೇ ಸ್ಥಾಪಿಸಿದ್ದ 'ಬಹಿಷ್ಕೃತ ಹಿತಕಾರಿಣೀ ಸಭಾ' ದ ಮೂಲಕ ಮನವಿಪತ್ರವನ್ನು ಸಲ್ಲಿಸಿದರು. ೧೯೨೮, ಅಕ್ಟೋಬರ್ ೨೫ರಂದು ನಡೆದ ಸೈಮನ್ ಕಮಿಷನ್ ಮತ್ತು ಮುಂಬೈ ಪ್ರಾಂತೀಯ ಸಮಿತಿಗಳ ಜಂಟಿ ಸಮಾವೇಶದಲ್ಲಿ ಹಾಜರಾದ ಅಂಬೇಡ್ಕರ್‌ರವರು ತಳಸಮುದಾಯದ ಬೇಡಿಕೆಗಳಿಗೆ ಧ್ವನಿಯಾದರು. ನಿಮ್ನ ವರ್ಗದವರು ಪ್ರತ್ಯೇಕ, ಸ್ವತಂತ್ರ ಮತ್ತು ಅಲ್ಪಸಂಖ್ಯಾತ

ಜನವರ್ಗವಾಗಿದ್ದು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅತ್ಯಂತ ಹಿಂದುಳಿದವರೂ ಇತರ ಅಲ್ಪಸಂಖ್ಯಾತರಿಗಿಂತ ಅಸ್ಪೃಶ್ಯತೆಯ ಭೀಕರಶಾಪಕ್ಕೆ ಒಳಗಾದವರೂ ಆಗಿರುವುದರಿಂದ ಪ್ರತ್ಯೇಕ ಮತಕ್ಷೇತ್ರ ಮತ್ತು ಮೀಸಲಾತಿಗಳನ್ನು ಕೇಳುತ್ತೇವೆ ಎಂದು ವಾದಿಸಿದ ಅವರು ಮುಂಬೈ ಶಾಸನ ಸಭೆಯ ೧೪೦ ಸ್ಥಾನಗಳಲ್ಲಿ ಜನಸಂಖ್ಯಾ ಬಲಕ್ಕನುಗುಣವಾಗಿ ೨೨ ಸ್ಥಾನಗಳನ್ನು ನಿಮ್ನವರ್ಗಗಳಿಗೆ ಮೀಸಲಿಡ ಬೇಕೆಂಬ ಕೋರಿಕೆಯನ್ನು ಆಗ್ರಹಪಡಿಸಿದರು. ಅಂಬೇಡ್ಕರವರ ಚಿಂತನೆಗಳೊಂದಿಗೆ ಅನೇಕ ಸಮಾಜಸೇವಕರು, ವಿಚಾರವಾದಿಗಳು, ಹಿಂದುಳಿದವರು ಮಾತ್ರವಲ್ಲದೆ ಉದಾರವಾದಿ ಸವರ್ಣೀಯ ಹಿಂದೂಗಳೂ ಶಾಮೀಲಾಗಿದ್ದರು. ಆದರೆ ೧೯೨೯, ಮೇ ೭ರಂದು ಮಂಡಿತವಾದ ಸೈಮನ್ ಕಮಿಷನ್ ವರದಿಯಲ್ಲಿ ಅಂಬೇಡ್ಕರ್ ಸಲ್ಲಿಸಿದ ಬೇಡಿಕೆಗಳನ್ನು ಕೈಬಿಡಲಾಗಿತ್ತು. ತಮ್ಮ ಬೇಡಿಕೆಗಳನ್ನು ಮಾನ್ಯಮಾಡಿಲ್ಲವೆಂಬ ಸತ್ಯದ ಅರಿವಾದ ತಕ್ಷಣವೇ ಅಂಬೇಡ್ಕರ್‌ರವರು ಜಾಗೃತರಾದರು. ಸೈಮನ್ ಕಮಿಷನ್ ವರದಿ ಸಮಂಜಸವಾಗಿಲ್ಲವೆಂದು ಘೋಷಿಸಿ ತಾವೇ ಪ್ರತ್ಯೇಕ ವರದಿಯನ್ನು ತಯಾರಿಸಿ ಸರಕಾರಕ್ಕೆ ಸಮರ್ಪಿಸಿದರು. ಅತ್ಯಂತ ಸೈದ್ಧಾಂತಿಕವೂ, ವಿಚಾರಪ್ರಬುದ್ಧವೂ ಆದ ಈ ವರದಿ ಅಂಬೇಡ್ಕರ್‌ರವರ ಧೀಮಂತ ವ್ಯಕ್ತಿತ್ವಕ್ಕೆ ಕೋಡು ಮೂಡಿಸಿ 'ಅವರು ರಾತ್ರೋರಾತ್ರಿ ಉದ್ದಾಮ ರಾಜಕಾರಣಿಯಾಗಿ, ಶ್ರೇಷ್ಠ ದೇಶಪ್ರೇಮಿಯಾಗಿ, ಅಸ್ಪೃಶ್ಯ ಸಮುದಾಯದಲ್ಲಿ ಕಾಣಿಸಿಕೊಂಡ ಅಮೂಲ್ಯ ವಜ್ರವಾಗಿ ಪ್ರತಿಬಿಂಬಿತರಾದರು.' (ಅದೇ. ಪು. ೧೩೬)

೧೯೩೦ರಲ್ಲಿ ಲಂಡನಿನಲ್ಲಿ ನಡೆದ ಮೊದಲನೆಯ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಬ್ರಿಟಿಷ್ ಸರಕಾರ ಅಂಬೇಡ್ಕರ್‌ರವರಿಗೆ ಆಹ್ವಾನ ನೀಡಿದ್ದು ದಲಿತ ಸಮುದಾಯದ ಇತಿಹಾಸದಲ್ಲೇ ಒಂದು ಅಭೂತಪೂರ್ವವಾದ ದಾಖಲೆಯಾಗಿತ್ತು. ನವೆಂಬರ್ ೧೭ರಿಂದ ೨೧ರವರೆಗೆ ನಡೆದ ಪರಿಷತ್ತಿನ ಅಧಿವೇಶನದಲ್ಲಿ ಮಾತನಾಡಿದ ಅಂಬೇಡ್ಕರ್ ಸಮಾನತೆ ಮತ್ತು ಸೋದರತೆಗಳ ಬುನಾದಿಯಲ್ಲಿ ನಿರ್ಮಿತವಾದ ಸಂವಿಧಾನದಿಂದ ಮಾತ್ರ ಭಾರತದ ಸರ್ವಸಮುದಾಯಗಳ ಅಭಿವೃದ್ಧಿ ಸಾಧ್ಯ ಎಂಬ ತಮ್ಮ ಮೂಲಭೂತ ನಿಲುವನ್ನು ಸಮರ್ಥಿಸಿದರು. ಹಾಗೆಯೇ ನಮ್ಮ ವರ್ಗಗಳ ಜನರಿಗೆ ಸಮಾನ ಹಕ್ಕುಗಳೊಂದಿಗೆ ಪ್ರತ್ಯೇಕ ಚುನಾವಣೆಯ ಮೂಲಕ ತಮ್ಮ ಪ್ರತಿನಿಧಿಗಳನ್ನು ತಾವೇ ಆರಿಸಿಕೊಳ್ಳುವ ಅವಕಾಶಗಳನ್ನು ನೂತನ ಸಂವಿಧಾನದ ನಿಯಮಾವಳಿಗಳಲ್ಲಿ ಅಳವಡಿಸಬೇಕೆಂದೂ ಒತ್ತಾಯಪಡಿಸಿದರಲ್ಲದೆ 'ಭಾರತ ಸ್ವರಾಜ್ಯದ ಭಾವೀ ಸಂವಿಧಾನದಲ್ಲಿ ನಿಮ್ನ ವರ್ಗಗಳ ರಕ್ಷಣೆಗೆ ಸಂಬಂಧಿಸಿದ ರಾಜಕೀಯ ರಕ್ಷಣಾ ಕ್ರಮಗಳ ಯೋಜನೆ' ಎಂಬ ಶೀರ್ಷಿಕೆಯಡಿಯಲ್ಲಿ ತಮ್ಮ ವಿಚಾರಪ್ರಣಾಳಿಕೆಗಳನ್ನು ಮಂಡಿಸಿ ಅದರ ಪ್ರತಿಗಳನ್ನು ದೇಶಾದ್ಯಂತ ರಾಜಕೀಯ ಧುರೀಣರ ಸಮಾಲೋಚನೆಗೆ ಕಳುಹಿಸಿದರು. ಅಂಬೇಡ್ಕರ್‌ರವರ ದಲಿತಪರ ವಿಚಾರಧಾರೆಗಳನ್ನು ಅಧ್ಯಯನ ಮಾಡಿದ ಗಾಂಧೀಜಿಯವರು ದಲಿತರಿಗೆ ಪ್ರತ್ಯೇಕ ಚುನಾವಣೆಯ ಹಕ್ಕನ್ನು ನೀಡಿದರೆ ಹಿಂದೂಧರ್ಮದ ಅಖಂಡತೆಗೆ ಧಕ್ಕೆಯಾಗುತ್ತದೆಂಬ ಭಯವನ್ನು ವ್ಯಕ್ತಪಡಿಸಿ ಅಂಬೇಡ್ಕರ್‌ರವರನ್ನೇ ಸಮಾಲೋಚನೆಗೆ ಆಹ್ವಾನಿಸಿದರು. ಗಾಂಧೀಜಿಯವರ ಆಹ್ವಾನದ

ಮೇರೆಗೆ ೧೯೩೧, ಆಗಸ್ಟ್ ೧೪ರಂದು ಅಂಬೇಡ್ಕರ್ ಗಾಂಧೀಜಿಯವರನ್ನು ಭೇಟಿ ಮಾಡಿದರು. ಅಸ್ಪೃಶ್ಯರ ಸಮಾನತೆ ಮತ್ತು ಸ್ವಾತಂತ್ರ್ಯದ ಬಗ್ಗೆ ಗಾಂಧೀಜಿಯವರಿಗೆ ವೈಯಕ್ತಿಕವಾಗಿ ಯಾವುದೇ ಭಿನ್ನಾಭಿಪ್ರಾಯವಿಲ್ಲದಿದ್ದರೂ ಬಹುಜನ ಸಮಾಜದ ನಂಬಿಕೆ ಹಾಗೂ ಭಾವನೆಯನ್ನು ವಿರೋಧಿಸುವುದರಲ್ಲಿ ಅವರಿಗೆ ಒಪ್ಪಿಗೆಯಿರಲಿಲ್ಲ. ೧೯೩೧ರಲ್ಲಿ ನಡೆದ ಎರಡನೆಯ ದುಂಡುಮೇಜಿನ ಪರಿಷತ್ತಿನಲ್ಲಿ ನಿಮ್ನವರ್ಗಗಳ ಪರವಾಗಿ ಅಂಬೇಡ್ಕರ್ ಮಂಡಿಸಿದ ಬೇಡಿಕೆಗಳಿಗೆ ಗರಿಷ್ಠ ಬೆಂಬಲ ದೊರಕಿದ್ದರೂ ಎರಡನೆಯ ದುಂಡುಮೇಜಿನ ಪರಿಷತ್ತಿನ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸಿದ ಗಾಂಧೀಜಿ ಮುಸಲ್ಮಾನರಿಗೆ, ಸಿಕ್ಖರಿಗೆ ಅಥವಾ ಹಿಂದೂಗಳಲ್ಲದ ಯಾವುದೇ ಅಲ್ಪಸಂಖ್ಯಾತರಿಗೆ ಈ ಸೌಲಭ್ಯ ನೀಡುವುದಕ್ಕೆ ತಮ್ಮ ಅಭ್ಯಂತರವಿಲ್ಲವೆಂದೂ ಹಿಂದೂ ಸಮುದಾಯದ ಅವಿಭಾಜ್ಯ ಅಂಗವಾಗಿರುವ ನಿಮ್ನ ಸಮುದಾಯದವರಿಗೆ ಈ ಅನುಕೂಲವನ್ನು ನೀಡುವುದರಲ್ಲಿ ತಮಗೆ ಒಪ್ಪಿಗೆಯಿಲ್ಲವೆಂದೂ ಸರಕಾರದ ಒಡೆದು ಆಳುವ ಈ ನೀತಿಯಿಂದ ಹಿಂದೂಧರ್ಮ ಹೋಳಾಗುತ್ತದೆಂದೂ ವಾದಿಸಿ ಅಂಬೇಡ್ಕರ್‌ರ ಬೇಡಿಕೆಗಳಿಗೆ ತಮ್ಮ ತೀವ್ರ ಪ್ರತಿರೋಧ ವ್ಯಕ್ತಪಡಿಸಿದರು. ಆದರೆ ಅಂಬೇಡ್ಕರ್‌ರವರು ಯಾವ ಕಾರಣಕ್ಕೂ ತಮ್ಮ ಹಕ್ಕುಗಳನ್ನು ಬಿಟ್ಟುಕೊಡಲಿಲ್ಲ. ತತ್ಪರಿಣಾಮವಾಗಿ ೧೯೩೨ರ ಆಗಸ್ಟ್‌ನಲ್ಲಿ ಆಗಿನ ಬ್ರಿಟಿಷ್ ಪ್ರಧಾನಮಂತ್ರಿಯಾಗಿದ್ದ ರಾಮ್ಸೆ ಮೆಕ್ಡೊನಾಲ್ಡ್ ಎಂಬವರು ಮುಸ್ಲಿಂ, ಸಿಖ್, ಕ್ರಿಸ್ಟಿಯನ್, ಯುರೋಪಿಯನ್, ಆಂಗ್ಲೋ ಇಂಡಿಯನ್ ಮುಂತಾದ ಸರ್ವ ಮತೀಯರನ್ನು ಪುರಸ್ಕರಿಸುವ ಸಂದರ್ಭದಲ್ಲಿ ದಲಿತರಿಗೂ ಪ್ರತ್ಯೇಕ ಚುನಾವಣೆ ಮತ್ತು ಮತದಾನದ ಹಕ್ಕನ್ನು ಮಂಜೂರು ಮಾಡಿದರು. ಅಲ್ಲಿಗೆ ಅಂಬೇಡ್ಕರ್‌ರವರ ಬೇಡಿಕೆ ಈಡೇರಿದಂತಾಯ್ತು. ಆದರೆ ಆ ಸಮಯದಲ್ಲಿ ಪೂನಾದ ಎರವಾಡದ ಜೈಲಿನಲ್ಲಿ ಸೆರೆಮನೆವಾಸವನ್ನು ಅನುಭವಿಸುತ್ತಿದ್ದ ಗಾಂಧೀಜಿಯವರು ಸರಕಾರ ತಕ್ಷಣವೇ ತನ್ನ ಆದೇಶವನ್ನು ಹಿಂತೆಗೆಯದಿದ್ದರೆ ತಾನು ನಿರಶನ ಸತ್ಯಾಗ್ರಹವನ್ನು ಮಾಡುತ್ತೇನೆಂದು ಘೋಷಿಸಿದರು. ಗಾಂಧೀಜಿಯವರು ಆಮರಣಾಂತ ಉಪವಾಸ ಮಾಡುತ್ತಾರೆಂಬ ವಾರ್ತೆ ಕಾಳ್ಗಿಚ್ಚಿನಂತೆ ದೇಶಾದ್ಯಂತ ಹರಡಿತು. ಇದರಿಂದ ಮೇಲುವರ್ಗದ ಸಂಪ್ರದಾಯನಿಷ್ಠ ಭಾರತೀಯರು ಅಂಬೇಡ್ಕರ್‌ರವರನ್ನು ದೇಶದ್ರೋಹಿ ಎಂದು ನಿಂದಿಸಿದರು. ಪಂಡಿತ ಮದನಮೋಹನ ಮಾಲವೀಯ, ಪಾಲ್ವಂಕಾರ್ ಬಾಲೂ ಮುಂತಾದ ರಾಜಕೀಯ ಧುರೀಣರು ಅಂಬೇಡ್ಕರ್‌ರವರ ಮನವೊಲಿಸಲು ಪ್ರಯತ್ನಿಸಿದರು. ಗಾಂಧೀಜಿಯವರು ಉಪವಾಸ ಸತ್ಯಾಗ್ರಹದ ತೀರ್ಮಾನ ತೆಗೆದುಕೊಂಡರೆ ಅದಕ್ಕೆ ತಾವು ಕಾರಣರಲ್ಲವೆಂದೂ ಅದಕ್ಕಾಗಿ ನಿಮ್ನ ಸಮುದಾಯದ ಹಿತದೃಷ್ಟಿಯನ್ನು ಬಲಿಕೊಡಲು ತಾವು ತಯಾರಿಲ್ಲವೆಂದೂ ಅಂಬೇಡ್ಕರ್ ತಮ್ಮ ಖಡಾಖಂಡಿತ ನಿಲುವನ್ನು ಪ್ರಕಟಿಸಿದರು.ಆದರೆ ಇಡೀ ದೇಶವೇ ತಮ್ಮ ವಿರುದ್ಧ ತಿರುಗಿ ನಿಂತಾಗ ಅಂಬೇಡ್ಕರ್‌ರವರಿಗೆ ತಮ್ಮ ನಿರ್ಧಾರವನ್ನು ಕೈಬಿಡಲೇ ಬೇಕಾದ ಅನಿವಾರ್ಯತೆಯುಂಟಾಯ್ತು. ಆದರೂ ಅವರು ಪ್ರತ್ಯೇಕ ಮತಕ್ಷೇತ್ರಗಳ ವಿಚಾರವನ್ನು ಕೈಬಿಡಬೇಕಾದರೆ ಅದಕ್ಕೆ ಪರ್ಯಾಯವಾಗಿ ಮೀಸಲಾತಿಗೊಳಪಟ್ಟು ನಿಮ್ನವರ್ಗಗಳಿಗೆ ನ್ಯಾಯಯುತ ಪರಿಹಾರವನ್ನು ನೀಡಬೇಕೆಂದು ಹಕ್ಕೊತ್ತಾಯ ಮಾಡಿದರು. ಅದರಂತೆ

ಕಾಂಗ್ರೆಸ್ ಮುಖಂಡರು ಗಾಂಧೀಜಿಯವರೊಂದಿಗೆ ಸಮಾಲೋಚನೆ ಮಾಡಿ ಅವರ ಅನುಮತಿಯಂತೆ ನಿಮ್ನವರ್ಗೀಯರಿಗೆ ಕೆಲವೊಂದು ಪರಿಹಾರವನ್ನು ನೀಡಿದರು. ಆದರೆ ಅಂಥ ಜುಜುಬಿ ಪರಿಹಾರಕ್ಕೆ ತಮ್ಮ ನಿಲುವನ್ನು ಬಿಟ್ಟುಕೊಡಲು ಅಂಬೇಡ್ಕರ್ ಒಪ್ಪಲಿಲ್ಲ. ಅವರು ಪ್ರಾಂತೀಯ ಶಾಸನ ಸಭೆಗಳಲ್ಲಿ ನಿಮ್ನವರ್ಗೀಯರಿಗೆ ೧೨೬ ಸ್ಥಾನಗಳ ಬದಲು ೧೯೭ನ್ನು ಕೊಡಲೇಬೇಕೆಂಬ ಬೇಡಿಕೆಯನ್ನು ಕಾಂಗ್ರೆಸ್‌ನ ಮುಂದಿಟ್ಟರು. ಮಾತ್ರವಲ್ಲ ಮೀಸಲು ಕ್ಷೇತ್ರಗಳನ್ನು ೨೫ ವರ್ಷಗಳ ಕಾಲ ದಲಿತ ಸಮುದಾಯಕ್ಕೆ ಕಾದಿರಿಸಬೇಕೆಂದೂ ಅನಂತರ ಅವುಗಳನ್ನು ಮುಂದುವರಿಸಬೇಕೇ ಬೇಡವೇ ಎಂಬುದನ್ನು ಜನಾಭಿಪ್ರಾಯದಂತೆ ನಿರ್ಣಯಿಸಬಹುದೆಂದೂ ತಿಳಿಸಿದರು. ಆದರೆ ಗಾಂಧೀಜಿಯವರು ಅದನ್ನು ಅಂಗೀಕರಿಸಲಿಲ್ಲ. ಮೀಸಲು ಕ್ಷೇತ್ರಗಳ ವಿಚಾರದಲ್ಲಿ ಜನಾಭಿಪ್ರಾಯವನ್ನು ಕೇಳಲು ೨೫ ವರ್ಷಗಳ ಬದಲು ೫ ವರ್ಷಗಳ ಅವಧಿಯನ್ನಷ್ಟೇ ನೀಡಬಹುದೆಂದು ಅವರು ಸೂಚಿಸಿದರು. ಅಂಬೇಡ್ಕರ್‌ಗೆ ಮತ್ತೆ ವಾದಮಾಡುವ ಅವಕಾಶ ಲಭಿಸಲಿಲ್ಲ. ಪ್ರಜ್ಞಾಹೀನರಾಗಿ ಮರಣೋನ್ಮುಖ ಸ್ಥಿತಿಯಲ್ಲಿದ್ದ ಗಾಂಧೀಜಿಯವರೇನಾದರೂ ಉಪವಾಸದಿಂದ ಮರಣಿಸಿದರೆ ಸಂಭವಿಸಬಹುದಾದ ಅನಾಹುತಗಳು ಅವರನ್ನು ಅಲುಗಾಡಿಸಿದುವು. ಮಾತ್ರವಲ್ಲ ಅಸ್ಪೃಶ್ಯರ ಮೇಲೆ ನಡೆಯಬಹುದಾದ ದೌರ್ಜನ್ಯ, ಹಲ್ಲೆಗಳ ಬಗ್ಗೆಯೂ ಅಂಬೇಡ್ಕರ್ ಯೋಚಿಸಬೇಕಾಗಿತ್ತು. ಆದರೂ ಮೀಸಲು ಸ್ಥಾನಗಳ ಬಗ್ಗೆ ಪಟ್ಟುಹಿಡಿದು ಅವುಗಳನ್ನು ೧೨೬ರಿಂದ ೧೪೮ಕ್ಕೆ ಏರಿಸುವಲ್ಲಿ ಅಂಬೇಡ್ಕರ್ ಸಫಲರಾದರು. ಬ್ರಿಟಿಷ್ ಭಾರತದ ಶಾಸನ ಸಭೆಯಲ್ಲಿ ಒಟ್ಟು ಸ್ಥಾನಗಳಲ್ಲಿ ಹತ್ತರಲ್ಲಿ ಒಂದು ಭಾಗ ನಿಮ್ನವರ್ಗಗಳಿಗೆ ನೀಡಲು ಕಾಂಗ್ರೆಸ್ ಒಪ್ಪಿಗೆ ನೀಡಿತು. ಹಾಗೆಯೇ ಗಾಂಧೀಜಿ ಹೇಳಿದ ೫ ವರ್ಷಗಳ ಮೀಸಲಾತಿ ಅವಧಿಗೆ ಅಂಬೇಡ್ಕರ್‌ರ ಸಹಮತ ನೀಡದೆ ಕನಿಷ್ಠ ೧೦ ವರ್ಷಗಳಾದರೂ ಬೇಕೆಂದು ಹಟ ಮಾಡಿದರು. ವಾದಪ್ರತಿವಾದಗಳು ನಡೆದು ಕೊನೆಗೆ ಮೀಸಲಾತಿಯ ಅವಧಿಯ ಕಾಲಗಣನೆಯನ್ನು ಕೈಬಿಟ್ಟು ಉಳಿದ ವಿಚಾರಗಳನ್ನು ಗಾಂಧೀಜಿಯವರಿಗೆ ಆಪ್ತರಾಗಿದ್ದ ರಾಜಗೋಪಾಲಾಚಾರಿಯವರ ಮೂಲಕ ಅಂಬೇಡ್ಕರ್‌ಗೆ ತಲುಪಿಸಿ ಅವರನ್ನು ಒಪ್ಪಿಸಿದರು. ಗಾಂಧೀ ಅಂಬೇಡ್ಕರ್ ನಡುವೆ ಪೂನಾದಲ್ಲಿ ನಡೆದ ಈ ಒಪ್ಪಂದವೇ 'ಪೂನಾ ಒಪ್ಪಂದ'ವೆಂದು ಚರಿತ್ರಾರ್ಹವಾಯ್ತು. ಇದರಿಂದ ಗಾಂಧೀಜಿಯವರ ಉಪವಾಸ ಸತ್ಯಾಗ್ರಹಕ್ಕೂ ಅಂಬೇಡ್ಕರ್‌ರವರ ಪ್ರತ್ಯೇಕ ಮತದಾನದ ಬೇಡಿಕೆಗೂ ಅಂತಿಮ ತೆರೆಬಿತ್ತು. ಪೂನಾ ಒಪ್ಪಂದದನ್ವಯ ಅಂಬೇಡ್ಕರ್ ಹಿಂದುಳಿದ ಜನಸಮುದಾಯಕ್ಕೆ ಅನಿರ್ದಿಷ್ಟ ಕಾಲಾವಧಿಯವರೆಗೆ ಮೀಸಲಾತಿಯ ಹಕ್ಕನ್ನು ಪಡೆದುಕೊಂಡಿದ್ದರು. ಇದು ಪರೋಕ್ಷವಾಗಿ ದಲಿತರಿಗೆ ವರದಾನವೇ ಆಯ್ತು. ಸವರ್ಣೀಯರ ಪರವಾಗಿ ಮದನ ಮೋಹನ ಮಾಲವೀಯರೂ ನಿಮ್ನವರ್ಗಗಳ ಪರವಾಗಿ ಅಂಬೇಡ್ಕರ್‌ರವರೂ ಸಹಿ ಹಾಕಿದ ಒಪ್ಪಂದಕ್ಕೆ ಮಾನ್ಯರಾದ ಜಯಕರ್, ಜಿ.ಡಿ. ಬಿರ್ಲಾ, ರಾಜಗೋಪಾಲಾಚಾರಿ, ಬಾಬೂ ರಾಜೇಂದ್ರ ಪ್ರಸಾದ್, ದೇವದಾಸ್ ಗಾಂಧಿ, ಸಿ.ವಿ. ಮೆಹ್ತಾ ಮುಂತಾದವರು ಸಾಕ್ಷಿಗಳಾಗಿದ್ದರು.

ಅಂಬೇಡ್ಕರ್‌ರವರ ಅಂತರಾತ್ಮ ಇಷ್ಟಕ್ಕೇ ತೃಪ್ತವಾಗಲಿಲ್ಲ. ೧೯೩೭ರಲ್ಲಿ ಭಾರತ ಸರ್ಕಾರದ ಕಾಯ್ದೆ ಪ್ರಕಾರ ನಡೆಯಲಿದ್ದ ಚುನಾವಣೆಯ ಸಲುವಾಗಿ ರಾಜಕೀಯ ಪಕ್ಷಗಳೆಲ್ಲ ಸಿದ್ಧತೆ ಮಾಡತೊಡಗಿದುವು. ಅಂಬೇಡ್ಕರ್ ಸ್ವತಂತ್ರ ಕಾರ್ಮಿಕ ಪಕ್ಷವನ್ನು ಸ್ಥಾಪಿಸಿ ನಿಮ್ನ ವರ್ಗಗಳ ಹಿತರಕ್ಷಣೆಯ ಜತೆಜತೆಯಲ್ಲೇ ಭೂರಹಿತ ಕೃಷಿ ಕೂಲಿಕಾರರ, ಬಡ ಗೇಣಿದಾರರ, ಸಣ್ಣ ರೈತರ, ಕಾರ್ಮಿಕರ ಸಮಸ್ಯೆಗಳನ್ನು ಕುರಿತು ಹೋರಾಡುವ ತೀರ್ಮಾನವನ್ನು ಕೈಗೊಂಡರು. ಸರ್ಕಾರೀ ಹುದ್ದೆಗಳಲ್ಲಿ ಪ್ರಾತಿನಿಧ್ಯವನ್ನು ನೀಡಿದರೆ ಮಾತ್ರ ಅನ್ಯಾಯವನ್ನು ಪ್ರತಿರೋಧಿಸುವ ಮತ್ತು ಆರ್ಥಿಕವಾಗಿ ಸಬಲಗೊಳ್ಳುವ ಶಕ್ತಿ ನಿಮ್ನವರ್ಗೀಯರಿಗೆ ಬರುತ್ತದೆಂಬುದು ಅಂಬೇಡ್ಕರ್‌ರವರ ಸ್ಪಷ್ಟ ನಿಲುವಾಗಿತ್ತು. ೧೯೪೫ರಲ್ಲಿ ಸಾರ್ವತ್ರಿಕ ಚುನಾವಣೆ ಘೋಷಿತವಾದಾಗ ಅಂಬೇಡ್ಕರ್ 'ಸ್ಪಷ್ಟ ಸಾಮಾಜಿಕ ದೃಷ್ಟಿಕೋನವಿಲ್ಲದ ಕಾಂಗ್ರೆಸ್ಸು ಬಂಡವಾಳಶಾಹಿ-ಜಮೀನ್ದಾರೀ ಶಕ್ತಿಗಳ ಪರವಾಗಿದೆ. ನಿಮ್ನ ವರ್ಗಗಳ ಬಗ್ಗೆ ಅದೆಂದೂ ಪ್ರಾಮಾಣಿಕ ಕಾಳಜಿಯನ್ನು ತೋರಿಲ್ಲ. ಆದ್ದರಿಂದ ನಿಮ್ನವರ್ಗಗಳು ತಮ್ಮ ರಾಜಕೀಯ ಬಲವನ್ನು ಕ್ರೋಡೀಕರಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ತಮ್ಮ ಕೈಗೆ ಅಧಿಕಾರವನ್ನು ತೆಗೆದುಕೊಂಡು ತಮ್ಮ ಹಕ್ಕುಗಳ ರಕ್ಷಣೆಯನ್ನು ಮಾಡಬೇಕು. ಈಗಿನ ಚುನಾವಣೆಯಿಂದ ಅಸ್ತಿತ್ವಕ್ಕೆ ಬರಲಿರುವ ಪ್ರಾಂತೀಯ ಶಾಸನ ಸಭೆಗಳ ಮೂಲಕವೇ ಸ್ವತಂತ್ರ ಭಾರತದ ಸಂವಿಧಾನ ರಚನಾ ಸಮಿತಿಯು ರೂಪುಗೊಳ್ಳಲಿರುವುದರಿಂದ ಎಲ್ಲಾ ಪ್ರಾಂತೀಯ ಶಾಸನ ಸಭೆಗಳಿಗೆ ನಿಮ್ನವರ್ಗಗಳು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಪ್ರತಿನಿಧಿಗಳನ್ನು ಚುನಾಯಿಸಬೇಕಾಗಿದೆ.' (ಅದೇ ಪು. ೩೬೧) ಎಂದು ಕರೆ ನೀಡಿದರು.

ಪೂನಾ ಒಪ್ಪಂದದಲ್ಲಿ ನಿಮ್ನವರ್ಗೀಯರ ಪರವಾಗಿ ಶಿಫಾರಸ್ಸು ಮಾಡಲಾದ ಯಾವ ಸೌಲಭ್ಯಗಳೂ ಅನುಷ್ಠಾನಕ್ಕೆ ಬಂದಿರಲಿಲ್ಲ. ಇದರಿಂದ ನೊಂದ ಅಂಬೇಡ್ಕರ್ ಕಾಂಗ್ರೆಸ್ಸಿನ ದ್ವಂದ್ವನೀತಿಯನ್ನು ಕಟುವಾಗಿ ಟೀಕಿಸಿದರು. ಮಾತ್ರವಲ್ಲ ಭಾರತದ ಸ್ವಾತಂತ್ರ್ಯಾನಂತರ ರಚನೆಯಾಗುವ ಸಂವಿಧಾನದಲ್ಲಿ ನಿಮ್ನವರ್ಗೀಯರ ಹಕ್ಕುಬಾಧ್ಯತೆಗಳನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕೆಂದು ವಾದಿಸಿದ ಅಂಬೇಡ್ಕರ್ ಯಾವುದೇ ಸಂವಿಧಾನ ದೇಶದ ಸಮಸ್ತ ಜನವರ್ಗದ ಹಿತವನ್ನು ಕಾಯುವಂತಿರಬೇಕೆಂದು ಎಚ್ಚರಿಸಿದರು. ಸ್ವತಂತ್ರ ಭಾರತದಲ್ಲಿ ಹಿಂದೂ ಸವರ್ಣೀಯ ಮತ್ತು ಮುಸ್ಲಿಮರೊಂದಿಗೆ ಅಸ್ಪೃಶ್ಯರಿಗೂ ಸಮಾನವಾಗಿ ಅಧಿಕಾರ ಸಿಗಬೇಕೆಂಬ ವಿಚಾರದಲ್ಲಿ ಅವರ ನಿಲವು ಅಚಲವಾಗಿತ್ತು. ಅದಕ್ಕಾಗಿ ಶಿಕ್ಷಣ, ಸಂಘಟನೆ ಮತ್ತು ಹೋರಾಟಗಳೇ ನಿಮ್ನವರ್ಗಗಳ ಧ್ಯೇಯವಾಗಬೇಕೆಂದು ಪ್ರತಿಯೊಂದು ಸಭೆ, ಸಮಾರಂಭಗಳಲ್ಲೂ ಅವರು ಹೇಳುತ್ತಿದ್ದರು.

ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಪ್ರಚಂಡ ಗೆಲುವನ್ನು ಸಾಧಿಸಿದ ಬಳಿಕ ಬ್ರಿಟಿಷ್ ಸರಕಾರಕ್ಕೆ ಭಾರತದ ಆಡಳಿತವನ್ನು ಕೊನೆಗೊಳಿಸಲೇಬೇಕಾದ ಅನಿವಾರ್ಯತೆ ಬಂದೊದಗಿತು. ಆ ಸಂದರ್ಭದಲ್ಲಿ ಬ್ರಿಟಿಷ್ ಮಂತ್ರಿಮಂಡಲದ ಮೂವರು ಸಚಿವರ ತಂಡ ಭಾರತದ ವಿವಿಧ ಬಣಗಳ ಮುಖಂಡರೊಡನೆ ಮಾತುಕತೆಗೆ ಮುಂದಾಯ್ತು. ಮುಂದೆ ರಚಿತವಾಗಲಿರುವ ನೂತನ ಸಂವಿಧಾನದಲ್ಲಿ ನಿಮ್ನವರ್ಗಗಳ ಪ್ರತಿನಿಧಿಗಳನ್ನು

ಚುನಾಯಿಸುವ ಅಧಿಕಾರವನ್ನು ನಿಮ್ನವರ್ಗಗಳಿಗೇ ನೀಡಬೇಕೆಂದೂ ಕೇಂದ್ರ ಹಾಗೂ ಪ್ರಾಂತೀಯ ಶಾಸನ ಸಭೆಗಳಲ್ಲಿ ಜನಸಂಖ್ಯೆಗನುಗುಣವಾಗಿ ಪ್ರಾತಿನಧ್ಯವನ್ನು ನೀಡಬೇಕೆಂದೂ ಅಂಬೇಡ್ಕರ್ ಬ್ರಿಟಿಷ್ ಅಧಿಕಾರಿಗಳಿಗೆ ತಿಳಿಸಿದರು. ದಲಿತರಿಗೆ ಸರ್ಕಾರೀ ವಲಯಗಳಲ್ಲಿ ಮೀಸಲಾತಿಯನ್ನೂ ಶಿಕ್ಷಣಕ್ಕೆ ಆರ್ಥಿಕ ಸಹಾಯವನ್ನೂ ಮಂಜೂರು ಮಾಡಬೇಕೆಂದು ಆಗ್ರಹಿಸಿದರು. ಸಮಾನತೆಯೆಂಬುದು ರಾಜಕೀಯಕ್ಕೆ ಮಾತ್ರ ಮೀಸಲಾಗಿದ್ದರೆ ಸಾಲದು, ಅದು ಜನರ ಸಾಮಾಜಿಕ ಮತ್ತು ಆರ್ಥಿಕ ಮಟ್ಟವನ್ನು ಕೂಡ ಸಮಾನವಾಗಿ ಪರಿಗಣಿಸುವಂತಿರಬೇಕೆಂದು ಅಂಬೇಡ್ಕರ್ ವಾದಿಸಿದರು. ಆದರೆ ಬ್ರಿಟಿಷ್ ತಂಡ ನೀಡಿದ ವರದಿಯಲ್ಲಿ ನಿಮ್ನವರ್ಗಗಳಿಗೆ ಯಾವುದೇ ಅವಕಾಶವನ್ನು ನಮೂದಿಸಿಲ್ಲವೆಂದು ಅಂಬೇಡ್ಕರ್‌ಗೆ ತಿಳಿಯಿತು. ತಮ್ಮ ಪ್ರತಿಯೊಂದು ಪ್ರಯತ್ನವೂ ಕೊನೆಯ ಹಂತದಲ್ಲಿ ಕುಸಿಯುತ್ತಿರುವುದನ್ನು ಮನಗಂಡ ಅಂಬೇಡ್ಕರ್ ಬ್ರಿಟಿಷರನ್ನು ನೇರವಾಗಿ ಮನವೊಲಿಸಿ ಕಾರ್ಯಸಾಧನೆ ಮಾಡಲು ಮುಂದಾದರು. ಈ ಭೇಟಿಯಲ್ಲಿ ಅಂಬೇಡ್ಕರ್‌ರವರ ಪ್ರಯತ್ನ ನಿರೀಕ್ಷಿತ ಫಲವನ್ನೇ ನೀಡಿತು. ಪರಸ್ಪರ ಮಾತುಕತೆಯ ಬಳಿಕ ಅಸ್ಪೃಶ್ಯ ಸಮುದಾಯಕ್ಕೆ ನ್ಯಾಯ ದೊರಕಿಸುವ ಭರವಸೆಯನ್ನಲ್ಲದೆ ಸಂವಿಧಾನ ರಚನೆಯಲ್ಲಿ ಕಾಂಗ್ರೆಸ್ ಧುರೀಣರೊಂದಿಗೆ ಸಹಕರಿಸುವ ಅವಕಾಶವನ್ನೂ ಅಂಬೇಡ್ಕರ್ ಪಡೆದುಕೊಂಡರು.

**ಸಂವಿಧಾನ ಮತ್ತು ಮೀಸಲಾತಿ**

ಆಗಸ್ಟ್ ೧೯೪೭ರಲ್ಲಿ ಭಾರತ ಸ್ವಾತಂತ್ರ್ಯವನ್ನು ಪಡೆದ ಬಳಿಕ ಕಾಂಗ್ರೆಸ್ ಅಧಿಕಾರಕ್ಕೆ ಬಂದು ಕೇಂದ್ರ ಸರ್ಕಾರದ ಮಂತ್ರಿಮಂಡಲ ರಚನೆಯಾಯ್ತು. ಇದರಲ್ಲಿ ಮೊತ್ತಮೊದಲನೆಯ ಕಾನೂನು ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ಅಂಬೇಡ್ಕರ್‌ರವರು ಸಂವಿಧಾನ ರಚನೆಯ ಸಮಿತಿಯ ಅಧ್ಯಕ್ಷರಾಗಿಯೂ ನಿಯುಕ್ತರಾದರು. ಭಾರತದ ಇತಿಹಾಸದಲ್ಲೇ ಪ್ರಪ್ರಥಮ ಬಾರಿಗೆ ಅಸ್ಪೃಶ್ಯರೊಬ್ಬರು ದೇಶದ ನಾಯಕರಾಗಿ ಆಯ್ಕೆಯಾಗಿದ್ದರು. ಜೀವನದುದ್ದಕ್ಕೂ ಯಾವ ಸಮಾಜ ಅನ್ಯಾಯದಿಂದ ಮಾಡಿದ ಕಾಯ್ದೆ ಕಟ್ಟಳೆಗಳಿಗೆ ಗುರಿಯಾಗಿ ಅತ್ಯಂತ ಹೀನಾಯವಾದ ಅವಮಾನಕ್ಕೆ ಗುರಿಯಾಗಿದ್ದರೋ ಅದೇ ಸಮಾಜದ ಭವಿಷ್ಯವನ್ನು ರೂಪಿಸುವ, ನ್ಯಾಯಬದ್ಧವಾದ ಕಾನೂನು, ಕಟ್ಟಳೆಗಳನ್ನು ರಚಿಸುವ ಗುರುತರವಾದ ಜವಾಬ್ದಾರಿ ಈಗ ಅಂಬೇಡ್ಕರ್‌ರವರ ಪಾಲಿಗೆ ಬಂದಿತ್ತು.ಸ್ವತಂತ್ರ ಭಾರತದ ಸಂವಿಧಾನದ ಮೊತ್ತಮೊದಲ ರೂವಾರಿಯಾದ ಅಂಬೇಡ್ಕರ್ ಸಮಾಜದಲ್ಲಿ ಬೇರುಬಿಟ್ಟಿದ್ದ ಲಿಂಗ, ವರ್ಗ, ವರ್ಣ ತಾರತಮ್ಯವನ್ನು ಸಂಪೂರ್ಣವಾಗಿ ನಿರಾಕರಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಲಭಿಸುವ ಮೊದಲೇ ಜಾತೀಯತೆಯ ತಾರತಮ್ಯವನ್ನು ನಿರ್ಮೂಲನ ಮಾಡಬೇಕೆಂದು ರಾಜ್ಯ ಸರ್ಕಾರಗಳು ಆದೇಶಿಸಿದ್ದರೂ ಅದು ಎಲ್ಲೂ ಅನುಷ್ಠಾನಕ್ಕೆ ಬಂದಿರಲಿಲ್ಲವೆಂದೂ ಸರ್ಕಾರೀ ಕಡತಗಳಲ್ಲಿ ಮುಚ್ಚಿಹೋಗಿದ್ದ ಈ ತೋರಿಕೆಯ ಕಾಯ್ದೆಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳ್ಳುವಂತೆ ಮಾಡಬೇಕೆಂದೂ ಅಂಬೇಡ್ಕರ್ ಆಗ್ರಹಿಸಿದಂತೆ ಈಗ ಅಂಬೇಡ್ಕರ್ ನೇತೃತ್ವದ ಕೇಂದ್ರ ಸರಕಾರ ಕ್ರಮ ತೆಗೆದುಕೊಳ್ಳಬೇಕಾಗಿತ್ತು. ತಮ್ಮ ಆರೋಗ್ಯವನ್ನೂ ನಿರ್ಲಕ್ಷಿಸಿ ನಿರಂತರವಾದ

ಪರಿಶ್ರಮ, ವಿವೇಕ, ವಿಚಾರ, ದೂರದರ್ಶಿತ್ವಗಳಿಂದ ತಮಗೆ ಲಭಿಸಿದ ಅಧಿಕಾರವನ್ನು ಸದುಪಯೋಗಪಡಿಸಿದ ಅಂಬೇಡ್ಕರ್ ಎಂಟು ಅಧ್ಯಾಯಗಳಿರುವ ೩೧೫ ಪರಿಚ್ಛೇದಗಳಿರುವ ಸಂವಿಧಾನದ ಕರಡು ಪ್ರತಿಯನ್ನು ತಯಾರಿಸಿ ಸಭೆಯಲ್ಲಿ ಮಂಡಿಸಿದರು. ೧೯೪೭ರಿಂದ ೧೯೫೦ರವರೆಗೆ ಮೂರು ವರ್ಷಗಳ ಕಾಲ ಅದರಲ್ಲಿ ಉಲ್ಲೇಖಿತವಾಗಿದ್ದ ಸಂವಿಧಾನದ ನಿಯಮಾವಳಿಗಳ ಬಗ್ಗೆ ಚರ್ಚೆ, ಸಮಾಲೋಚನೆಗಳು ನಡೆದು ದಿನಾಂಕ ೬.೦೧.೧೯೫೦ರಂದು ನೂತನ ಸಂವಿಧಾನ ಜ್ಯಾರಿಯಾಯ್ತು.ಇದರಲ್ಲಿ ಎಲ್ಲ ನಾಗರಿಕರಿಗೆ ನೀಡುವ ಸೌಲಭ್ಯದೊಂದಿಗೆ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಪರಿಶಿಷ್ಟಜಾತಿ ಮತ್ತು ಪಂಗಡದ ಜನರಿಗಾಗಿ ಮೀಸಲಾತಿಯ ವಿಶೇಷ ನಿಯಮಾವಳಿಗಳನ್ನೂ ಅಳವಡಿಸಲಾಯ್ತು. ರಾಜಕೀಯದಲ್ಲಿ ಪ್ರಾತಿನಿಧ್ಯ ದೊರಕಿಸುವ ಸಲುವಾಗಿ ೧೦ ವರ್ಷಗಳ ಕಾಲ ಪ್ರತ್ಯೇಕ ಮತಕ್ಷೇತ್ರಗಳನ್ನೂ ಹಂಚಿಕೆ ಮಾಡಿತು. ೮ ಅಧ್ಯಾಯ ೩೧೫ ಪರಿಚ್ಛೇದಗಳಿದ್ದ ಸಂವಿಧಾನದ ನಿಯಮಾವಳಿಗಳು ಪರಿಷ್ಕೃತಗೊಂಡ ಬಳಿಕ ೮ ಅಧ್ಯಾಯ ೪೯೫ ಅನುಚ್ಛೇದಗಳಾಗಿ ಅನುಷ್ಠಾನಕ್ಕೆ ಬಂದುವು. ಇದರ ೩೩೫, ೩೩೮, ೩೪೧ ಮತ್ತು ೩೪೨ರ ಅನುಚ್ಛೇದಗಳಲ್ಲಿ ಭಾರತದ ನಿಮ್ನಾತಿನಿಮ್ನ ಬಂಧುಗಳಿಗಾಗಿ ಎಲ್ಲ ಬಗೆಯ ಅಭಿವೃದ್ಧಿ ಯೋಜನೆಗಳ ಶಾಸನಗಳನ್ನು ಅಂಬೇಡ್ಕರ್ ಅಳವಡಿಸಿದರು. ಸಂವಿಧಾನದ ೧೪ನೆಯ ಅನುಚ್ಛೇದದ ಪ್ರಕಾರ ಯಾರಾದರೂ ದಲಿತ ವಿರೋಧೀ ಪ್ರಕ್ರಿಯೆಗಳಲ್ಲಿ ತೊಡಗಿದರೆ ಅವರಿಗೆ ಕಾನೂನು ರೀತ್ಯಾ ಶಿಕ್ಷೆ ನೀಡಬೇಕೆಂಬ ವಿಚಾರ ಕೂಡ ಅಂಗೀಕೃತವಾಯ್ತು. ಪಾರ್ಲಿಮೆಂಟಿನ ೫೪೩ ಸೀಟುಗಳಲ್ಲಿ ೧೩೧ ರಷ್ಟು ಸೀಟುಗಳು ದಲಿತರಿಗೆ ಮೀಸಲಾದುವು. ಅನುದಾನಿತ ಮತ್ತು ಸಾರ್ವಜನಿಕ ಸಂಸ್ಥೆಗಳಲ್ಲೂ ಮೀಸಲಾತಿ ಯೋಜನೆಯನ್ನು ಕಾನೂನು ರೀತ್ಯಾ ಅನುಸರಿಸಬೇಕೆಂಬ ಆದೇಶವನ್ನು ಸರಕಾರ ಹೊರಡಿಸಿತು.

**ಮೀಸಲಾತಿಯ ಸಾಧಕಬಾಧಕಗಳು**

ನಿಮ್ನ ಜನಾಂಗದ ಆ ಕಾಲದ ಪರಿಸ್ಥಿತಿಯನ್ನು ಗಮನಿಸಿದಾಗ ಮೀಸಲಾತಿ ಯೋಜನೆ ಅತ್ಯಂತ ಸಮುಚಿತವೂ ಅರ್ಥಪೂರ್ಣವೂ ಸ್ವಾಗತಾರ್ಹವೂ ಆಗಿತ್ತು.೫೦೦೦ ವರ್ಷಗಳಿಂದ ಪ್ರಪಾತದಂಚಿಗೆ ತಳ್ಳಲ್ಪಟ್ಟ ಜನಸಮುದಾಯವನ್ನು ಮೀಸಲಾತಿಯೆಂಬ ಪಾತಾಳ ಗರಡಿಯಿಂದ ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮೇಲೆತ್ತಬೇಕಾದ ಅಗತ್ಯವಿತ್ತು. ಮೀಸಲಾತಿ ಕತ್ತಲೆ ತುಂಬಿದ ನಿಮ್ನಜನಾಂಗದ ಬಾಳಿನಲ್ಲಿ ಹೊಸಬೆಳಕು ಮೂಡಿಸಿ ಮಾನವೀಯ ಮೌಲ್ಯವನ್ನು ಸಾರ್ಥಕಗೊಳಿಸಿತ್ತು. ಇದರಿಂದ ಸರಕಾರ ಕೊಡಮಾಡಿದ ಸವಲತ್ತುಗಳನ್ನು ಪಡೆದು ಶಿಕ್ಷಣ, ಉದ್ಯೋಗ, ರಾಜಕೀಯದ ಎಲ್ಲ ಸ್ತರಗಳಲ್ಲೂ ಹಂತಹಂತವಾಗಿ ಬೆಳೆದು ಸಮಾಜದ ಮುಖ್ಯವಾಹಿನಿಯೊಂದಿಗೆ ಸಮರಸಗೊಳ್ಳುವುದಕ್ಕೆ ದಲಿತರಿಗೆ ಸಾಧ್ಯವಾಯ್ತು.

ಸಂವಿಧಾನದತ್ತವಾದ ಈ ಮೀಸಲಾತಿ ಯೋಜನೆ ಸಮರ್ಪಕವಾಗಿ ಕೆಲಸ ನಿರ್ವಹಿಸಿದರೆ ಕೆಲವು ವರ್ಷಗಳ ಬಳಿಕ ಪುನರ್ ಪರಿಶೀಲನೆ ನಡೆಸಿ ಅದನ್ನು

ಕೈಬಿಡಬಹುದೆಂಬುದು ಸರಕಾರದ ತೀರ್ಮಾನವಾಗಿತ್ತು. ಅಂಬೇಡ್ಕರ್ ಕೂಡ ಈ ತೀರ್ಮಾನಕ್ಕೆ ಬದ್ಧರಾಗಿದ್ದರು. ಹಾಗಾಗಿ ಕೆಲವು ವರ್ಷಗಳ ಬಳಿಕ ಈ ಸೌಲಭ್ಯ ನಿರೀಕ್ಷಿತ ಮಟ್ಟದಲ್ಲಿ ಯಶಸ್ವಿಯಾಗಿದೆಯೇ? ಅದನ್ನು ವಿಸ್ತರಿಸಬೇಕೇ ಬೇಡವೇ ಎಂಬ ಪ್ರಶ್ನೆ ಸರಕಾರದ ಮುಂದೆ ನಿಂತಾಗ ಆಯೋಗಗಳನ್ನು ರಚಿಸುವುದರ ಮೂಲಕ ಪರಿಶಿಷ್ಟಜಾತಿ/ಪಂಗಡಗಳ ಸ್ಥಿತಿಗತಿಗಳ ತನಿಖೆಯನ್ನು ನಡೆಸಲಾಯ್ತು. ಆದರೆ ತನಿಖೆ ನೀಡಿದ ವರದಿ ನಿರಾಶಾದಾಯಕವಾಗಿದ್ದು ೧೯೫೩ರಲ್ಲಿ ರಚನೆಯಾದ ಕಾಲೇಕರ್ ಆಯೋಗ ಸಲ್ಲಿಸಿದ ವರದಿಯನ್ವಯ ಮೀಸಲಾತಿ ಯೋಜನೆಯನ್ನು ಇನ್ನಷ್ಟು ಕಾಲ ಮುಂದುವರಿಸಬೇಕೆಂಬ ವಿಚಾರ ಅಂಗೀಕೃತವಾಯ್ತು. ಆದರೆ ಮೀಸಲಾತಿ ಸೌಲಭ್ಯಗಳು ನಿಜವಾದ ಫಲಾನುಭವಿಗಳನ್ನು ತಲಪದೆ ವಕ್ರಮಾರ್ಗಕ್ಕೆ ಹೊರಳತೊಡಗಿದುವು. ರಾಜಕೀಯ ಪುಡಾರಿಗಳ ಸ್ವಾರ್ಥ, ಷಡ್ಯಂತ್ರಗಳು ಈ ಯೋಜನೆಯನ್ನು ದರೋಡೆ ಮಾಡಿದುವು. ಸರಕಾರದ ಆದೇಶವನ್ನು ಉಲ್ಲಂಘಿಸಿ ಪರಿಶಿಷ್ಟಜಾತಿ/ಪಂಗಡಗಳಿಗೆ ಮೀಸಲಾದ ಸ್ಥಾನಗಳನ್ನು ಬೇರೆಯವರು ಭರ್ತಿ ಮಾಡಿದರು. ಕುತೂಹಲಕರವಾದ ವಿಚಾರವೆಂದರೆ ಮೀಸಲಾತಿ ಸೌಲಭ್ಯಗಳು ಯಾರಿಗೆ ಸೇರುತ್ತವೆ? ಇವುಗಳ ನಿಜವಾದ ಫಲಾನುಭವಿಗಳು ಯಾರು? ಎಂಬುದು ಕೂಡ ನಿಗೂಢವಾಯ್ತು. ಮೀಸಲಾತಿ ಸೌಲಭ್ಯ ಅನುಷ್ಠಾನಗೊಂಡು ಆರೇಳು ದಶಕಗಳು ಕಳೆದರೂಇನ್ನೂ ಅಂಬೇಡ್ಕರ್ ಕನಸು ನನಸಾಗಲಿಲ್ಲ.

**ಮೀಸಲಾತಿ ಮತ್ತು ಜಾಗತೀಕರಣ/ ಪರ-ವಿರೋಧ ವಾದಗಳು**

ಇವತ್ತು ವಿಶ್ವದಾದ್ಯಂತ ಜಾಗತೀಕರಣದ ಗಾಳಿ ಬಿರುಸಾಗಿ ಬೀಸುತ್ತಿದ್ದು ಬಹುರಾಷ್ಟ್ರೀಯ ಹಾಗೂ ಖಾಸಗೀ ಕಂಪೆನಿಗಳು ತಲೆಯೆತ್ತುತ್ತಿವೆ. ಆಧುನಿಕ ತಂತ್ರಜ್ಞಾನದ ಆವಿಷ್ಕಾರದಿಂದಾಗಿ ವಿಶ್ವಮಾರುಕಟ್ಟೆಯಲ್ಲಿ ಪೈಪೋಟಿಗಿಳಿದಿರುವ ಖಾಸಗೀ ಕಂಪೆನಿಗಳು ಗುಣಮಟ್ಟದ ಕಾರಣದಿಂದ ಮೀಸಲಾತಿಯನ್ನು ಒಪ್ಪದಿರುವುದರಿಂದ ದಲಿತ/ಹಿಂದುಳಿದ ಅಭ್ಯರ್ಥಿಗಳು ಮೀಸಲಾತಿಯ ಮೂಲಕ ಪಡೆಯುವ ಉದ್ಯೋಗಾವಕಾಶಗಳಿಂದ ವಂಚಿತರಾಗುತ್ತಿದ್ದಾರೆ. ಆರ್ಥಿಕ ಉದಾರೀಕರಣ ಖಾಸಗಿ ಕ್ಷೇತ್ರಗಳನ್ನು ಪ್ರಬಲಗೊಳಿಸಿ ದುದರ ಪರಿಣಾಮವಾಗಿ ಭಾರತೀಯ ಕೃಷಿ ಉತ್ಪನ್ನಗಳು, ಕುಲಕಸುಬುಗಳು, ಗುಡಿ ಕೈಗಾರಿಕೆಗಳು ಮಾರುಕಟ್ಟೆಯಲ್ಲಿ ಬೆಲೆ ಕಳೆದುಕೊಂಡು ಬಡವರ ಬದುಕು ಅತಂತ್ರವಾಗು ತ್ತಲಿದೆ. ಇಂಥ ಪರಿಸ್ಥಿತಿಯಲ್ಲಿ ಮೀಸಲಾತಿಯನ್ನು ಖಾಸಗೀ ಕ್ಷೇತ್ರಗಳವರೆಗೆ ವಿಸ್ತರಿಸ ಬೇಕೆಂದೂ, ವಿತರಣೆಗಳು ರಾಜಕೀಯ ಪುಡಾರಿಗಳ ಹಸ್ತಕ್ಷೇಪದಿಂದ ಮುಕ್ತವಾಗಿ ನ್ಯಾಯಬದ್ಧವಾಗಿರಬೇಕೆಂದೂ ದಲಿತ ಪರ ವಿಚಾರವಾದಿಗಳು ವಾದಿಸುತ್ತಿದ್ದಾರೆ. ಖಾಸಗಿ ಕಂಪೆನಿಗಳು ಉತ್ಪನ್ನಗಳ ಗುಣಮಟ್ಟದ ಕಾರಣದಿಂದ ಪರಿಶಿಷ್ಟಜಾತಿ/ಪಂಗಡಗಳನ್ನು ಹೊರಗಿಡುವುದನ್ನು ವಿರೋಧಿಸುವ ಇವರು ಅಮೇರಿಕ ದೇಶದ ಮೀಸಲಾತಿ ಯೋಜನೆ ಯನ್ನು ಉದಾಹರಿಸುತ್ತಾರೆ. ಅಲ್ಲಿ ಕಪ್ಪು ಜನಾಂಗದ ಹಿತದೃಷ್ಟಿಯಿಂದ ಕೈಗೊಳ್ಳಲಾದ ಅಫರ್ಮೇಟಿವ್ ಆಕ್ಷನ್ (ಸಕಾರಾತ್ಮಕ ಕ್ರಮ) ತುಂಬ ಯಶಸ್ವಿಯಾಗಿ ನಡೆಯುತ್ತಿದೆ ಯೆಂದೂ ಅತಿ ಶ್ರೀಮಂತ ಕಂಪೆನಿಗಳು ಈ ಕ್ರಮವನ್ನು ಅಳವಡಿಸಿಕೊಂಡಿದೆಯೆಂದೂ

ಈ ಸುಧಾರಣೆಯಿಂದ ಅಲ್ಲಿನ ಕಪ್ಪು ಜನಾಂಗದವರು ಅತ್ಯಂತ ಉನ್ನತ ಹುದ್ದೆಗಳಲ್ಲಿ ವಿರಾಜಮಾನರಾಗಿದ್ದಾರೆಂದೂ ತಿಳಿಸುತ್ತ ಭಾರತದ ಖಾಸಗೀ ಕಂಪೆನಿಗಳ ವ್ಯಾಪಾರ ನೀತಿಯನ್ನು ಖಂಡಿಸುತ್ತಾರೆ. ಭಾರತದಲ್ಲಿ ಟಾಟಾಗ್ರೂಪಿನವರನ್ನು ಹೊರತುಪಡಿಸಿದರೆ ಉಳಿದ ಖಾಸಗಿ ಕಂಪೆನಿಗಳು ಮೀಸಲಾತಿಯನ್ನು ಒಪ್ಪಿಕೊಳ್ಳುವುದಿಲ್ಲ. ಮೀಸಲಾತಿಯಿಂದ ಉತ್ಪಾದನೆಗಳ ಗುಣಮಟ್ಟ ಕಡಿಮೆಯಾಗಿ ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಅಪಾರವಾದ ನಷ್ಟವನ್ನು ಅನುಭವಿಸಬೇಕಾಗುತ್ತದೆನ್ನುವುದು ಅವರ ಆಕ್ಷೇಪ. ಆದರೆ ಇದು ದಲಿತರನ್ನು ದೂರ ಮಾಡುವುದಕ್ಕಿರುವ ಪೊಳ್ಳುನೆಪವೆಂದು ಖಂಡಿಸುವ ದಲಿತಪರ ವಾದಿಗಳು ಬಹುರಾಷ್ಟ್ರೀಯ ಕಂಪೆನಿಗಳು ಮತ್ತು ಇತರ ಖಾಸಗೀ ಕಂಪೆನಿಗಳು ಕೂಡ ಸರಕಾರದ ಈಗಿನ ಮೀಸಲಾತಿ ಯೋಜನೆಯನ್ನು ಇನ್ನಷ್ಟು ಊರ್ಜಿತಗೊಳಿಸಿ ಅನುಷ್ಠಾನಕ್ಕೆ ತರಬೇಕೆಂದು ಆಗ್ರಹ ಪಡಿಸುತ್ತಿದ್ದಾರೆ.

ದಲಿತರು ಸಮಾನತೆ ಮತ್ತು ರಾಜಕೀಯ ಅಗತ್ಯತೆಯನ್ನು ಸಾಧಿಸಬೇಕಿದ್ದರೆ ಮೀಸಲಾತಿಯೋಜನೆ ಇನ್ನಷ್ಟು ಕಾಲ ಮುಂದುವರಿಸಲೇಬೇಕು. ಮೀಸಲಾತಿಯಿಂದ ಗುಣಮಟ್ಟ ಕಡಿಮೆಯಾಗುತ್ತದೆನ್ನುವುದು ಕೆಲವು ಕ್ಷೇತ್ರಗಳಲ್ಲಿ ನಿಜವಾದರೂ ಅದನ್ನು ಬೇರೆ ವಿಧಾನದಲ್ಲಿ ಸುಧಾರಿಸಿಕೊಳ್ಳಬೇಕಾಗಿದೆ.ಅಂದರೆ ಅಭ್ಯರ್ಥಿಯ ಅರ್ಹತಾನುಸಾರ ಉದ್ಯೋಗದ ಅವಕಾಶವನ್ನು ಇತರ ಕ್ಷೇತ್ರಗಳಿಗೆ ವಿಸ್ತರಿಸಬೇಕು. ಮೀಸಲಾತಿ ಯೋಜನೆ ಅಸ್ಪೃಶ್ಯರಿಗೆ ದೊರಕಿದ ವರದಾನವಾಗಿರುವುದರಿಂದ ಅದನ್ನು ಕೈಬಿಡುವುದರಿಂದ ಇನ್ನಷ್ಟು ಸಮಸ್ಯೆಗಳು ಉದ್ಭವವಾಗಬಹುದು ಎನ್ನುವುದು ದಲಿತಪರ ವಾದವಾದರೆ ಮೀಸಲಾತಿಯಿಂದ ಅರ್ಹ ಅಭ್ಯರ್ಥಿಗೆ ಉದ್ಯೋಗವಿಲ್ಲದೆ ಪ್ರತಿಭಾ ಪಲಾಯನವಾಗು ತ್ತದೆಂಬ ವಿರೋಧಮತವಿದೆ. ಮೀಸಲಾತಿ ವಿರೋಧಿಗಳ ಈ ಅಭಿಪ್ರಾಯಕ್ಕೆ ಸವಾಲು ಹಾಕುತ್ತ ಮೀಸಲಾತಿಪರ ವಾದಿಗಳು 'ಮನುಷ್ಯ ಮನುಷ್ಯರೊಳಗೆ ಭೇದಭಾವಕ್ಕಿಂತ ಮಿಗಿಲಲ್ಲ ಪ್ರತಿಭಾಪಲಾಯನ; ಮೀಸಲಾತಿ ಯನ್ನು ವಿರೋಧಿಸುವವರು ರಾಷ್ಟ್ರಾಭಿಮಾನ ವಿಲ್ಲದವರು' ಎನ್ನುತ್ತಾರೆ. ಮಾತ್ರವಲ್ಲ ಉದ್ಯೋಗದ ಅವಕಾಶಗಳನ್ನು ಹೆಚ್ಚು ಹೆಚ್ಚು ಸೃಷ್ಟಿ ಮಾಡಿಕೊಳ್ಳುವುದರಿಂದ ಪ್ರತಿಭಾವಂತರು ದೇಶದಿಂದ ಪಲಾಯನ ಮಾಡಬೇಕಾಗಿಲ್ಲವೆನ್ನುವ ಇವರು ತಮ್ಮ ದಕ್ಷತೆ, ಕಾರ್ಯೋನ್ಮುಖತೆ ಸತತವಾಗಿ ಕ್ರಿಯಾಶೀಲವಾಗಿರುವಂತೆ ನೋಡಿಕೊಂಡರೆ ತಮ್ಮ ಪ್ರತಿಭೆಯನ್ನು ದೇಶದೊಳಗೆ ಪ್ರದರ್ಶಿಸಲು ಸಾಧ್ಯವೆನ್ನುವ ತರ್ಕವನ್ನು ಮಂಡಿಸುತ್ತಾರೆ.

ಮೀಸಲಾತಿಯ ವಿರೋಧಿಗಳ ಪ್ರಕಾರ ಮೀಸಲಾತಿ ಯೋಜನೆ ದಲಿತರಿಗೆ ವರದಾನವಾಗಿದ್ದರೂ ಈ ಕಾನೂನು ಸವರ್ಣೀಯರಿಗೆ ಶಾಪವಾಗಿ ಪರಿಣಮಿಸಿರು ವುದರಿಂದ ಮೀಸಲಾತಿ ಯೋಜನೆಯನ್ನು ರದ್ದುಗೊಳಿಸಿ ವ್ಯಕ್ತಿಯ ಅರ್ಹತೆಯನ್ನಷ್ಟೆ ಮಾನದಂಡವಾಗಿ ಪರಿಗಣಿಸಬೇಕು. ಒಂದು ಹಂತದವರೆಗೆ ಮೀಸಲಾತಿ ಯೋಜನೆಯನ್ನು ಜಾರಿಗೊಳಿಸುವುದು ಅಗತ್ಯವಾಗಿತ್ತು. ಆದರೆ ಅದನ್ನೇ ನಿರಂತರವಾಗಿ ಮುಂದುವರಿಸುವುದರಲ್ಲಿ ಅರ್ಥವಿಲ್ಲ. ಇಂಥ ಯೋಜನೆಗಳಿಂದ ನಿಜವಾದ ಪ್ರಗತಿ ಸಾಧ್ಯವಾಗುವುದಿಲ್ಲ. ಅಂಬೇಡ್ಕರ್ ಅವರ ಮೊಮ್ಮಗ ಪ್ರಕಾಶ್ ಅಂಬೇಡ್ಕರ್ ಕೂಡ

ಮೀಸಲಾತಿಯ ಪ್ರಸಕ್ತ ನೀತಿಗೆ ವಿರೋಧಿಗಳೇ ಆಗಿದ್ದಾರೆ. ಅವರ ಪ್ರಕಾರ ಅಂಬೇಡ್ಕರ್ ಅವರು ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯನ್ನು ದೂರಮಾಡಿ ಎಲ್ಲ ಸಮುದಾಯವೂ ತಾರತಮ್ಯವಿಲ್ಲದೆ ಏಕಪ್ರಕಾರವಾಗಿ ಬದುಕುವುದಕ್ಕೆ ಸಾಧ್ಯವಾಗುವವರೆಗೆ ಮೀಸಲಾತಿ ಇರಬೇಕು ಎಂದರಲ್ಲದೆ ಮೀಸಲಾತಿ ಯೋಜನೆ ಶಾಶ್ವತವಾಗಿರಬೇಕೆಂದು ಬಯಸಿರಲಿಲ್ಲ. ಆದರೆ ಇವತ್ತು ಯಾವ ರಾಜಕಾರಣಿಗೂ ಮೀಸಲಾತಿಯನ್ನು ಸಂವಿಧಾನದಿಂದ ಕಿತ್ತುಹಾಕುವ ತಾಕತ್ತಿಲ್ಲ.

ಮೀಸಲಾತಿ ನೀತಿಯಿಂದ ಅನೇಕ ಬಗೆಯ ಅನಾಹುತಗಳು ಸಂಭವಿಸುವ ಸಾಧ್ಯತೆಗಳಿವೆ. ಮೀಸಲಾತಿಯ ಆಧಾರದಿಂದ ಆಯ್ಕೆಯಾದವರಲ್ಲಿ ಪ್ರತಿಭೆಯ ಕೊರತೆ, ಸೋಮಾರಿತನ, ಬೇಜವಾಬ್ದಾರಿತನಗಳು ಹೆಚ್ಚಿ ನಿರ್ವಹಿಸುವ ಕಾರ್ಯಭಾರದ ಮೇಲೆ ದುಷ್ಪರಿಣಾಮವನ್ನುಂಟು ಮಾಡುತ್ತವೆ. ಬಹುರಾಷ್ಟ್ರೀಯ ಕಂಪೆನಿಗಳು ಮೀಸಲಾತಿಯನ್ನು ವಿರೋಧಿಸುವುದಕ್ಕೆ ಇದೇ ಮುಖ್ಯ ಕಾರಣ. ಖಾಸಗೀ ಸಂಸ್ಥೆಗಳಲ್ಲಿ ಮೀಸಲಾತಿಗೆ ತೀವ್ರ ವಿರೋಧಿಗಳಾಗಿದ್ದವರು ಬಜಾಜ್ ಕಂಪೆನಿಯ ರಾಹುಲ್ ಬಜಾಜ್ ಹಾಗೂ ಇಂಡಿಯನ್ ಇಂಡಸ್ಟ್ರಿಯಲ್ ಫೆಡರೇಷನ್‌ನ ಅಧ್ಯಕ್ಷರಾಗಿದ್ದ ಸುನೀಲ್ ಕುಮಾರ್‌ರವರು. ಇವರು ತಮ್ಮ ಉತ್ಪನ್ನಗಳು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿಗಿಳಿಯ ಬೇಕಾದ ಕಾರಣ ಅಭ್ಯರ್ಥಿಗಳ ಪ್ರತಿಭೆಗಲ್ಲದೆ ಬೇರೆ ಯಾವ ವಿಚಾರಕ್ಕೂ ತಮ್ಮ ಸಹಮತವಿಲ್ಲವೆಂದು ಘಂಟಾಘೋಷವಾಗಿ ಸಾರಿದ್ದರು.

ಜಾತಿಗಳ ಆಧಾರದಿಂದ ಮೀಸಲಾತಿಯನ್ನು ಜಾರಿಗೊಳಿಸಿದರೆ ಜಾತೀಯತೆಯನ್ನು ಪೋಷಿಸಿದಂತಾಗುತ್ತದೆ. ಸಮಾಜದಲ್ಲಿ ತಾರತಮ್ಯಕ್ಕೆ ಇಂಬುಕೊಟ್ಟಾಗುತ್ತದೆ.ಇದು ಸಮಾನತೆಯ ಅರ್ಥವನ್ನು ದುರ್ಬಲಗೊಳಿಸುತ್ತದೆ. ಮೀಸಲಾತಿಯಿಂದ ಜಾತೀಯತೆಯ ಅಂತರ ಮುಚ್ಚಿಹೋಗದೆ ಇನ್ನೂ ಅಧಿಕವಾಗುವ ಸಾಧ್ಯತೆಯಿದೆ. ಮೀಸಲಾತಿಯು ಚುನಾವಣೆಯನ್ನು ಕೆಲವು ಆಯ್ದ ಜಾತಿಗಳ ಗುತ್ತಿಗೆಯಾಗಿಸುತ್ತದೆ. ಇದು ಭಾರತೀಯ ಸಮಾಜವನ್ನೇ ದುರ್ಬಲಗೊಳಿಸುತ್ತದೆ. ಜಾತಿಯ ಹೆಸರಿನಲ್ಲಿ ಭ್ರಷ್ಟಾಚಾರ ಹೆಚ್ಚಿ ರಾಜಕೀಯ ಇಚ್ಛಾಶಕ್ತಿಯನ್ನು ಕುಂದಿಸುತ್ತದೆ. ಮೀಸಲಾತಿ ನೀತಿಯು ಸಾಮಾಜಿಕ ಅಥವಾ ರಾಜಕೀಯ ತತ್ವದ ವಿಶಾಲ ತಳಹದಿಯಲ್ಲಿ ನಿರ್ಮಾಣವಾಗಿಲ್ಲ. ಒಟ್ಟು ಜನಸಂಖ್ಯೆಯ ಸುಮಾರು ೬೦%ಕ್ಕೂ ಹೆಚ್ಚು ಜನರು ಗ್ರಾಮೀಣ ಭಾರತದಲ್ಲಿದ್ದು ಅವರಿಗೆ ಆಹಾರ, ಆರೋಗ್ಯ, ಅಕ್ಷರ, ಆಶ್ರಯ, ಆಧಾರ ಇತ್ಯಾದಿ ಮೂಲಭೂತ ಸೌಲಭ್ಯಗಳ ಅಗತ್ಯವಿದೆಯೇ ವಿನಾ ಮೀಸಲಾತಿಯಲ್ಲ. ಮುಂದುವರಿದ ಜನಾಂಗದವರು ಮೀಸಲಾತಿಯ ಹೊಡೆತದಿಂದ ಆರ್ಥಿಕವಾಗಿ ಬಡವರಾಗಿಯೇ ಉಳಿಯುತ್ತಾರೆ. ಅನೇಕ ಉದ್ಯಮಗಳು ಹಿಂದುಳಿದವರ ನಿಯಂತ್ರಣದಲ್ಲಿದ್ದು ಮೇಲ್ಜಾತಿಯವರು ಉದ್ಯೋಗರಹಿತರಾಗಿ ಇರಬೇಕಾಗುತ್ತದೆ. ಮೀಸಲಾತಿಯ ಕಾರಣದಿಂದ ಆಯ್ಕೆಗೊಂಡವರನ್ನು ಸರಕಾರದ ಔದಾರ್ಯನೀತಿಯಿಂದ ಬಂದವರೆಂದು ಭಾವಿಸುವುದರಿಂದ ಅವರು ಪ್ರತಿಭಾವಂತರಾದರೂ ಆತ್ಮವಿಶ್ವಾಸ ಮತ್ತು ಸ್ವಾಭಿಮಾನವನ್ನು ಕಳೆದುಕೊಂಡು ಸದಾ ಕೀಳರಿಮೆಯಲ್ಲಿ ನರಳುವ ಸಾಧ್ಯತೆಯಿದೆ. ಮೀಸಲಾತಿಯ ಮೂಲಕ ಸಿಗುವ ಸವಲತ್ತುಗಳು ದುರ್ಬಳಕೆಯಾಗಿ ಸಮಾಜದ

ಸ್ವಾಸ್ಥ್ಯ ಕೆಡುವ ಸಾಧ್ಯತೆಯಿದೆ. ಜನಬಲ, ಧನಬಲ, ಅಧಿಕಾರ ಬಲವುಳ್ಳವರು ಪ್ರಭಾವವನ್ನು ಬಳಸಿ ಮೀಸಲಾತಿಯ ಸೌಲಭ್ಯವನ್ನು ತಾವೇ ಪಡೆದುಕೊಂಡು ಕೋತಿ ಮೊಸರನ್ನ ತಿಂದು ಮೇಕೆ ಬಾಯಿಗೆ ಒರಸಿತು ಎಂಬಂತೆ ನಿಜವಾದ ಫಲಾನುಭವಿಗಳಿಗೆ ಅದನ್ನು ತಲಪಿಸುವುದಿಲ್ಲ.

**ಇನ್ನಿತರ ಸಮಸ್ಯೆಗಳು**

ಮೀಸಲಾತಿಯೆಂಬುದು ಸರಕಾರಿ ಕ್ಷೇತ್ರದಲ್ಲಿರುತ್ತ ಖಾಸಗಿ ಕ್ಷೇತ್ರಗಳಲ್ಲಿ ಇಲ್ಲವಾಗಿರುವುದರಿಂದ ಖಾಸಗಿ ಕ್ಷೇತ್ರದಲ್ಲಿ ದುಡಿಯುವವರು ಮಾತ್ರ ಬುದ್ಧಿವಂತರು, ಸರಕಾರೀ ನೌಕರರು ದಡ್ಡರು ಎಂಬ ಸಾರ್ವತ್ರಿಕ ತಪ್ಪುಕಲ್ಪನೆಗೆ ಅವಕಾಶವುಂಟಾಗಬಹುದು. (ಸರಕಾರೀ ಶಾಲೆ ಮತ್ತು ಖಾಸಗೀ ಶಾಲೆಗಳ ಉದಾಹರಣೆಯನ್ನೇ ನೋಡಬಹುದು.)

ಮೀಸಲಾತಿ ನೀತಿಯಿಂದ ಅವಕಾಶ ವಂಚಿತರಾದ ಮೇಲುವರ್ಗದ ಅರ್ಹ ಅಭ್ಯರ್ಥಿಗಳು ತಮಗಾದ ಅನ್ಯಾಯದಿಂದ ರೊಚ್ಚಿಗೆದ್ದು ದೊಂಬಿ, ಗಲಾಟೆ ಎಬ್ಬಿಸಬಹುದು ಇಲ್ಲ ಖಿನ್ನತೆಗೊಳಗಾಗಿ ಆತ್ಮಹತ್ಯೆ ಮಾಡಬಹುದು.

ಕಡಿಮೆ ಅಂಕಗಳನ್ನು ಪಡೆದವರಿಗೆ ಮೀಸಲಾತಿಯಲ್ಲಿ ಅವಕಾಶವನ್ನು ಕೊಟ್ಟು ಹೆಚ್ಚು ಅಂಕಗಳನ್ನು ಪಡೆದವರನ್ನು ತಾವು ಬಯಸಿದ ಕ್ಷೇತ್ರಗಳಲ್ಲಿ ಅವಕಾಶವಂಚಿತರನ್ನಾಗಿ ಮಾಡುವುದು ತೋಳಕುರಿಮರಿ ನ್ಯಾಯದಂತೆ ಅಮಾನವೀಯ.

**ಮೀಸಲಾತಿಯನ್ನು ರದ್ದು ಪಡಿಸಿದರೆ ಏನಾಗಬಹುದು?**

ದಲಿತರ ಪರಿಸ್ಥಿತಿ ಪುನಃ ೧೯ನೆಯ ಶತಮಾನದ ನಿಕೃಷ್ಟ ಸ್ಥಿತಿಗೆ ಹಿಂತಿರುಗುವುದು ಖಂಡಿತ. ತಮ್ಮ ಉನ್ನತ ಸ್ಥಾನ, ಮಾನ, ಅಧಿಕಾರ ಬಲಗಳಿಂದ ಸ್ವಲ್ಪ ಮಟ್ಟಿಗಾದರೂ ದಲಿತ ಜನವರ್ಗ ಸಮಾಜದಲ್ಲಿ ಗೌರವವನ್ನು ಸಂಪಾದಿಸಿದ್ದಾರೆ. ಮೀಸಲಾತಿ ರದ್ದುಗೊಳಿಸಿದರೆ ಅವರ ಸ್ಥಿತಿ ಬಾಣಲೆಯಿಂದ ಒಲೆಗೆ ಎಂಬಂತಾಗುತ್ತದೆ.

ಸ್ವತಂತ್ರವಾಗಿ ಎದ್ದುನಿಲ್ಲತಕ್ಕ ಬುದ್ಧಿಬಲ, ಆತ್ಮಬಲ, ಅಧಿಕಾರ ಬಲವಿಲ್ಲದ ಬಡವರು ಬಡವರಾಗಿಯೆ ಮುಂದುವರಿದು ಸಮಾಜದ ತುಳಿತಕ್ಕೊಳಗಾಗಿ, ಪರಿತ್ಯಕ್ತರಾಗಿ ಕೀಳರಿಮೆಯಿಂದ ಬಳಲುತ್ತಾರೆ.

ದಲಿತನಾದವನು ಅಧಿಕಾರದಲ್ಲಿ ನಿಯುಕ್ತನಾದರೂ ಒಂದೋ ಅವನು ಮೇಲುವರ್ಗದವರ ಚೇಲಾ ಆಗಿ ಉಳಿಯಬೇಕು, ಇಲ್ಲ ಅವರು ಕೊಡುವ ಅವಮಾನ, ಅನ್ಯಾಯಗಳನ್ನು ಸಹಿಸಬೇಕು.

ಬುದ್ಧಿ, ಸಾಮರ್ಥ್ಯಗಳಿದ್ದ ಪ್ರತಿಭಾವಂತರೂ ದಲಿತರೆಂಬ ಕಾರಣಕ್ಕಾಗಿ ಉನ್ನತ ಹುದ್ದೆ, ಉತ್ತಮ ಅವಕಾಶಗಳಿಂದ ವಂಚಿತರಾಗುತ್ತಾರೆ.

## ಮೀಸಲಾತಿಯ ವೈಫಲ್ಯ

ಮೀಸಲಾತಿ ಯೋಜನೆ ಅಯಶಸ್ವಿಯಾಗಿದೆಯೆಂದರೆ ಈಗಿರುವ ಸ್ಥಿತಿಯಲ್ಲಿ ಸ್ವಾರ್ಥಲಾಲಸಿಗಳ ಮೂಲಕ ಅದರ ದುರುಪಯೋಗವಾಗುತ್ತಿರುವುದು ಒಂದು ಕಾರಣವಾದರೆ ಸೌಲಭ್ಯದ ಫಲಾನುಭವಿಗಳ ಬೇಜವಾಬ್ದಾರಿ ವರ್ತನೆ ಕೂಡ ಇನ್ನೊಂದು ಕಾರಣವೆನ್ನುವುದನ್ನು ಅಲ್ಲಗಳೆಯುವಂತಿಲ್ಲ. ಮೀಸಲಾತಿಯಿಂದ ಅವಕಾಶವನ್ನು ಪಡೆದು ಅಧಿಕಾರಕ್ಕೆ ಬಂದವರು ಅನಂತರ ತಮ್ಮ ಮಕ್ಕಳು, ಬಂಧುಗಳೊಂದಿಗೆ ತಮ್ಮಷ್ಟಕ್ಕೆ ಒಂದು ದ್ವೀಪವಾಗುತ್ತ ಬಡತನ, ಹಿಂಸಾಚಾರ, ದೌರ್ಜನ್ಯಗಳನ್ನು ಅನುಭವಿಸುತ್ತಿರುವ ತಮ್ಮ ಸಮಾಜಬಾಂಧವರನ್ನು ನಿರ್ಲಕ್ಷಿಸುತ್ತಿದ್ದಾರೆ. ಸಮಾಜಸೇವೆಯ ದೀಕ್ಷೆ ಹೊತ್ತ ಜನನಾಯಕರೆನಿಸಿದವರು ಕೂಡ ಭ್ರಷ್ಟರಾಗುತ್ತ ಸಮಾಜಕ್ಕೆ ತಮ್ಮ ಜವಾಬ್ದಾರಿಯಿದೆ ಯೆಂಬುದನ್ನು ಯೋಚಿಸುತ್ತಿಲ್ಲ. ತಮ್ಮಿಂದ ಮತಪಡೆದು ಅಧಿಕಾರಕ್ಕೆ ಬಂದವರೇ ತಮ್ಮ ಬಗ್ಗೆ ಅಸಡ್ಡೆ ತೋರಿದರೆ ಆ ನೋವು ಜಾತೀಯತೆಯ ಶೋಷಣೆಗಿಂತ ಅಧಿಕವಾಗುತ್ತದೆಂಬುದು ಇಂಥವರಿಗೆ ಅರ್ಥವಾಗುತ್ತಿಲ್ಲ. ಇವತ್ತು ದೇಶದೆಲ್ಲೆಡೆ ಲಕ್ಷಾಂತರ ಸಂಘ ಸಂಸ್ಥೆಗಳು ಸರಕಾರದ ಹಣವನ್ನು ಜನಾಂಗದ, ಸಾರ್ವಜನಿಕರ ಹಿತಾಸಕ್ತಿಗೆ ಬಳಸುವ ಯೋಜನೆಗಳನ್ನು ಹಾಕಿಕೊಂಡು ಅಭ್ಯುತ್ಥಾನಗೊಂಡಿವೆ. ಆದರೆ ಸಮುದಾಯದ ಬಗೆಗಿನ ನಿಜವಾದ ಕಾಳಜಿಯಿಂದ ಕಾರ್ಯಪ್ರವೃತ್ತವಾಗುವ ಸಂಸ್ಥೆಗಳು ಎಷ್ಟಿವೆ? ಹಣ, ಅಧಿಕಾರದ ಲಾಬಿಗಿಳಿದು ಭ್ರಷ್ಟಾಚಾರ, ಮೋಸ, ವಂಚನೆ, ಸ್ವಾರ್ಥಗಳಿಂದ ಕಲುಷಿತಗೊಂಡು ಬುದ್ಧಿಜೀವಿಗಳೆನಿಸಿದ ಸಂಘಟಕರೇ ಕೊಡಲಿಯ ಕಾವು ಕುಲಕ್ಕೆ ಮೂಲ ಎಂಬಂತೆ ತಮ್ಮವರಿಗೇ ಶತ್ರುಗಳಾಗುತ್ತಿದ್ದಾರೆ. ಯಾವ ಸಮಾಜದಲ್ಲಿ ೧೦ ಜನ ವೈದ್ಯರು, ೨೦ ಜನ ಇಂಜನಿಯರುಗಳು, ೩೦ ಜನ ವಕೀಲರು ಇರುತ್ತಾರೋ ಆ ಸಮಾಜವನ್ನು ಯಾರೂ ಏನೂ ಮಾಡುವುದಕ್ಕಾಗುವುದಿಲ್ಲವೆಂದು ಅಂಬೇಡ್ಕರ್‌ರವರು ಹೇಳುತ್ತಿದ್ದರು. ಆದರೆ ಅದೇ ದಲಿತ ಸಮುದಾಯದಲ್ಲಿ ಇಂದು ಸಾವಿರಾರು ಜನ ಡಾಕ್ಟರು, ಇಂಜನಿಯರುಗಳು, ವಕೀಲರು ತುಂಬಿದ್ದಾರೆ. ಜನಬಲ, ಧನಬಲ, ಅಧಿಕಾರ ಬಲಗಳಿರುವ ರಾಜಕೀಯ ನಾಯಕರು ತುಂಬಿದ್ದಾರೆ. ಆದರೆ ಪರಿಸ್ಥಿತಿ! ವಿದ್ಯೆ, ಉದ್ಯೋಗಳಿಲ್ಲದ ಗ್ರಾಮೀಣ ಬಡಜನರು ಅದೇ ಹಳೆಯ ನಂಬಿಕೆ, ಕಂದಾಚಾರಗಳಿಗೆ ಬಲಿಯಾಗಿ ನರಳುವ ಸ್ಥಿತಿ ತಪ್ಪಿಲ್ಲ. ಸರಕಾರ ತಮ್ಮಂಥವರಿಗೆ ಮೀಸಲಾತಿಯ ಅನುಕೂಲ ವನ್ನು ನೀಡಿದೆಯೆಂಬ ವಿಚಾರವೇ ಅವರಿಗೆ ತಲಪುತ್ತಿಲ್ಲ. ಇದರಿಂದ ಶ್ರೀಮಂತರು ಇನ್ನಷ್ಟು ಶ್ರೀಮಂತರಾಗುತ್ತ ಬಡವರು ಮತ್ತಷ್ಟು ಬಡವರಾಗುತ್ತ ಅವರವರೊಳಗೇ ಅಂತರ ಅಧಿಕವಾಗುತ್ತಲಿದೆ. ಎನ್.ಎಸ್.ಎಸ್.ಒ. (ನೇಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್) ಪ್ರಕಾರ ಒಬ್ಬ ಗ್ರಾಮೀಣ ವ್ಯಕ್ತಿ ತಿಂಗಳಿಗೆ ೩೨೭ ರೂ. ಹಾಗೂ ಒಬ್ಬ ನಗರವಾಸಿ ತಿಂಗಳಿಗೆ ರೂ ೪೫೪ಗಿಂತ ಕಡಿಮೆ ಖರ್ಚು ಮಾಡುವವರಾಗಿದ್ದರೆ ಅವರು ಬಡತನದ ರೇಖೆಗಿಂತ ಕೆಳಗಿರುವವರೆಂದರ್ಥ. ಇವತ್ತಿಗೂ ಸುಮಾರು ೫೦% ದಲಿತರು ಬಡತನದ ರೇಖೆಗಿಂತ ಕೆಳಗಡೆಯೇ ಇದ್ದಾರೆ.

ಸಮಾಜದ ಉನ್ನತ ಸ್ಥಾನಗಳಲ್ಲಿ ವಿರಾಜಮಾನರಾಗಿರುವ ದಲಿತರಾಗಲೀ ಹಿಂದುಳಿದವರಾಗಲೀ ತಮ್ಮ ಸಮುದಾಯದಿಂದಲೇ ಕಳಚಿಕೊಳ್ಳುವುದಕ್ಕೆ ಏನು ಕಾರಣವೆಂದು ಯೋಚಿಸಿದಾಗ ಅದಕ್ಕೆ ಅಹಂಕಾರ ಮತ್ತು ಸ್ವಾರ್ಥ ಮಾತ್ರವಲ್ಲ ಕೀಳರಿಮೆ ಕೂಡ ಕಾರಣವೆನಿಸುತ್ತದೆ. ಸ್ವಪ್ರಯತ್ನದಿಂದಲೊ ಸರಕಾರದ ಔದಾರ್ಯನೀತಿಯಿಂದಲೋ ಉನ್ನತಸ್ಥಿತಿಗೆ ಬಂದು ಸಮಾಜದಲ್ಲಿ ಪ್ರತಿಷ್ಠಿತರೆನಿಸಿದ ಮೇಲೆ ಅನೇಕರಿಗೆ ತಮ್ಮ ಮೂಲವನ್ನು ನೆನಪಿಸುವುದೇ ಅಸಹ್ಯವಾಗುತ್ತದೆ. ಈ ಕೀಳರಿಮೆಯಿಂದ ಮುಕ್ತರಾಗುವ ಸಲುವಾಗಿ ಅವರು ಮೇಲುವರ್ಗದೊಂದಿಗೆ ಗುರುತಿಸಿಕೊಳ್ಳುವುದನ್ನೇ ಇಷ್ಟಪಡುತ್ತಾರೆ. ಸರೀಕರ ಮುಂದೆ ತಮ್ಮ ಜಾತಿಯನ್ನಾಗಲೀ ಭಾಷೆಯನ್ನಾಗಲೀ ಬಹಿರಂಗ ಪಡಿಸಲು ಸಂಕೋಚಪಟ್ಟುಕೊಳ್ಳುವ ಅನೇಕ ಆಧುನಿಕ ವಿದ್ಯಾವಂತ ದಲಿತ/ ಹಿಂದುಳಿದ ವರ್ಗದವರ ಬದುಕಿನ ವಿಪರ್ಯಾಸವೂ ಇದೇ ಆಗಿದೆ.

ತಾವು ಇತರರಿಗಿಂತ ಮೇಲು ಅನ್ನಿಸಿಕೊಳ್ಳಬೇಕೆಂಬ ಹಂಬಲ ಎಲ್ಲ ಜಾತಿಗಳಲ್ಲೂ ಇದೆ. ದಲಿತರಲ್ಲೇ ಎಡಗೈ ಬಲಗೈ ಎಂದು ತಾರತಮ್ಯ ಮಾಡುವವರಿದ್ದಾರೆ. ಎಸ್.ಎಲ್. ಭೈರಪ್ಪನವರ 'ದಾಟು' ಕಾದಂಬರಿಯಲ್ಲಿ ಕೋಣಿಗಯ್ಯನೆಂಬ ಹೊಲೆಯ ತಾನು ಮಾದಿಗರಿಗಿಂತ ಮೇಲುಜಾತಿಯವನೆಂದೂ ಮಾದಿಗನಾದ ಎಂ.ಎಲ್.ಎ. ಬೆಟ್ಟಯ್ಯ ತನಗಿಂತ ಕೀಳುಜಾತಿಯವನೆಂದೂ ವಾದಿಸಿ ಬೆಟ್ಟಯ್ಯನ ಮನೆಯಲ್ಲಿ ಮಾಡಿದ ಅಡಿಗೆಯನ್ನು ಊಟ ಮಾಡಲು ನಿರಾಕರಿಸುತ್ತಾನೆ. ಬೆಟ್ಟಯ್ಯ ಶ್ರೀಮಂತ ರಾಜಕಾರಣಿಯಾಗಿದ್ದರೂ ಆತನ ಹಣ, ಅಧಿಕಾರಗಳು ಆತನಲ್ಲಿರುವ ಜಾತೀಯ ಕೀಳರಿಮೆಯನ್ನು ಹೋಗಲಾಡಿಸಲು ಸಮರ್ಥವಾಗುವುದಿಲ್ಲ. ಇದನ್ನು ಯೋಚಿಸಿಯೇ ಡಾ. ಅಂಬೇಡ್ಕರ್‌ರವರು 'ಮೊದಲು ಅಸ್ಪೃಶ್ಯ ಸಮುದಾಯದಲ್ಲಿರುವ ತಾರತಮ್ಯ ಭಾವನೆಯನ್ನು ತೊಡೆದು ಹಾಕಬೇಕಾಗಿದೆ. ನಮ್ಮಲ್ಲೇ ಭೇದಭಾವವನ್ನು ಇಟ್ಟುಕೊಂಡು ಸವರ್ಣ ಹಿಂದೂಗಳು ನಮ್ಮನ್ನು ಸಮಾನತೆ ಯಿಂದ ನೋಡಬೇಕೆಂದು ನಾವು ಹೇಗೆ ಕೇಳಲು ಸಾಧ್ಯ?' (ಪೂರ್ವೋಕ್ತ. ಪು. ೩೨೫) ಎಂದು ಪ್ರಶ್ನಿಸಿರುವುದು.

ತಮ್ಮ ಜನಾಂಗವನ್ನು ಉನ್ನತಿಗೆ ಏರಿಸುವಲ್ಲಿ ಅಂಬೇಡ್ಕರ್‌ರವರಿಗೆ ಅನೇಕ ಕನಸುಗಳಿದ್ದುವು, ದೂರದರ್ಶಿತ್ವಗಳಿದ್ದುವು. ಜಾತಿ, ಮತ ಭೇದವಿಲ್ಲದ ಸರ್ವಸಮಾನತೆಯ ಸಮಾಜದಲ್ಲಿ ತಮ್ಮವರು ಸುಖ, ಸಂತೋಷವಾಗಿರುವುದನ್ನು ನೋಡುತ್ತೇನೆಂಬ ನಿರೀಕ್ಷೆ, ಭರವಸೆ ಅವರಿಗಿತ್ತು. ಮೀಸಲಾತಿಯ ಮೂಲಕ ತಮ್ಮ ಇಡೀ ಜನಾಂಗ ಶತಶತಮಾನ ಗಳಿಂದ ಕಳೆದುಕೊಂಡ ನಷ್ಟವನ್ನು ತುಂಬಿಕೊಳ್ಳುತ್ತಾರೆಂಬ ಆಶೋತ್ತರಗಳಿದ್ದುವು. ಆದರೆ ದಲಿತಸಮಾಜ ಅವರ ನಿರೀಕ್ಷೆಯನ್ನು ಸುಳ್ಳು ಮಾಡಿತು. ತಮ್ಮ ನಂಬಿಕೆ, ಕನಸುಗಳೆಲ್ಲ ಭ್ರಮನಿರಸನಗೊಂಡ ನೋವನ್ನು ಅವರು ತಮ್ಮ 'ಜಾತಿಯ ನಿರ್ಮೂಲನ' ಎಂಬ ಕೃತಿಯಲ್ಲಿ ಮನಕಲಕುವಂತೆ ತೋಡಿಕೊಂಡಿದ್ದಾರೆ. ಅಂಬೇಡ್ಕರ್ ತೀರಿಹೋಗುವುದಕ್ಕೆ ಕೆಲವು ತಿಂಗಳ ಮೊದಲು ೧೯೫೬, ಜುಲೈ ೩೧ರಂದು ಅವರು ತಮ್ಮ ಆಪ್ತ ಕಾರ್ಯದರ್ಶಿ ನಾನಕ್ಚಂದ್ ರತ್ತುವಿಗೆ ಹೇಳಿದ ಮಾತುಗಳು ಮೀಸಲಾತಿ ಯೋಜನೆಯ ದುರಂತವನ್ನು ಕಣ್ಣಿಗೆ ರಾಚುತ್ತವೆ: 'ನನ್ನ ನೋವು ಸಂಕಟ ನಿಮಗೆ

ಯಾರಿಗೂ ಅರ್ಥವಾಗದು. ನನ್ನ ಜೀವಿತಾವಧಿಯಲ್ಲಿಯೇ ನನ್ನ ಸಮುದಾಯದವರು ಸುಖ ಸಂತೋಷದಲ್ಲಿರುವುದನ್ನು ನೋಡಬೇಕೆಂಬ ಉದ್ದೇಶ, ಮಹತ್ವಾಕಾಂಕ್ಷೆ ನನಗಿತ್ತು. ಆದರೆ ನನ್ನ ಜೀವನದ ಉದ್ದೇಶ ಇನ್ನೂ ಗುರಿ ಸೇರಿಲ್ಲ. ನಾನು ಇದುವರೆಗೆ ಏನನ್ನು ಸಾಧಿಸಿದೆನೋ ಅದರ ಫಲ ಕೆಲವೇ ಕೆಲವರಿಗೆ ಮಾತ್ರ ಲಭಿಸಿದೆ. ಬುದ್ಧಿಜೀವಿಗಳೆನಿಸಿದ ಅವರು ತಮ್ಮ ಸಮುದಾಯದವರಿಗೆ ಮಾರ್ಗದರ್ಶಕರೂ ಸಮಾಜ ಸುಧಾರಕರೂ ಆಗುವರೆಂದು ಭಾವಿಸಿದೆ. ಆದರು ಅವರು ಅದನ್ನು ಕೊಡಿಸಿದವರ ಹಿಂಬಾಲಕರಾಗಿ ಹಳ್ಳಿಯ ತಮ್ಮ ಕೋಟ್ಯಂತರ ಬಂಧುಗಳನ್ನು ಮರೆತು ನನ್ನ ನಿರೀಕ್ಷೆಯನ್ನು ಸುಳ್ಳು ಮಾಡಿದರು; ನನ್ನನ್ನು ವಂಚಿಸಿದರು. ನಾನು ನಂಬಿದ ನನ್ನವರೇ ತಮ್ಮ ಸಾಮಾಜಿಕ ಬದ್ಧತೆಯನ್ನು ಮರೆತು ಐಷಾರಾಮೀ ಬದುಕಿಗೆ ಮನಸೋತು ಸ್ವಾರ್ಥಸಾಧಕ ರಾಗುತ್ತಿರುವುದನ್ನು ನೋಡುತ್ತಿದ್ದೇನೆ. ಆದ್ದರಿಂದ ಈಗ ನಾನೇ ನನ್ನ ಸಾವಿರಾರು ನಿರ್ಗತಿಕ ಶೋಷಿತ ಹಳ್ಳಿಯ ಬಂಧುಗಳ ಪರವಾಗಿ ಪಣತೊಡಬೇಕಾಗಿದೆ. ಆದರೆ ಅಷ್ಟು ಕಾಲ ನಾನು ಬದುಕಿ ಉಳಿಯಬಲ್ಲೆನೆಂಬ ಭರವಸೆ ನನಗಿಲ್ಲ. ಯಾರ ಬಗ್ಗೆ ನಾನು ಅತೀವ ವಿಶ್ವಾಸ, ಭರವಸೆ ತಾಳಿದ್ದೆನೋ ಯಾರು ಈ ಚಳುವಳಿಯ ತೇರನ್ನು ಮುಂದುವರಿಸುತ್ತಾರೆಂದು ಭಾವಿಸಿದ್ದೆನೋ ಅವರೆಲ್ಲ ಅಧಿಕಾರ, ಅಂತಸ್ತುಗಳಿಗಾಗಿ ಕಚ್ಚಾಡುತ್ತಿರುವುದನ್ನು ನೋಡುವ ದುರ್ದೆಸೆ ನನ್ನದಾಗಿದೆ. ಜೀವನದುದ್ದಕ್ಕೂ ಬಹಳಷ್ಟು ಕಷ್ಟ ನಿಷ್ಠುರಗಳನ್ನು ಅನುಭವಿಸುತ್ತ ನೋವು ಸಂಕಟಗಳ ಹಳ್ಳಕೊಳ್ಳಗಳನ್ನು ನಿವಾರಿಸುತ್ತ ನಾನೀ ಹೋರಾಟದ ತೇರನ್ನು ಮುಂದಕ್ಕೆ ಸಾಗಿಸುತ್ತಿದ್ದೇನೆ. ನನ್ನ ಕೊನೆಯುಸಿರಿನ ತನಕ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಲಾರೆ. ಆದ್ದರಿಂದ ನಾನಕ್ ಚಂದ್, ಎಷ್ಟೇ ಕಷ್ಟಗಳು ಬಂದರೂ ಈ ಹೋರಾಟದ ತೇರನ್ನು ಮುನ್ನಡೆಸಬೇಕೆಂದು ನನ್ನ ಸಹಯಾತ್ರಿಕರಿಗೆ ನೀನು ಹೇಳಬೇಕು. ಅವರಿಗೆ ಅದನ್ನು ಮುಂದುವರಿಸಲು ಸಾಧ್ಯವಾಗ ದಿದ್ದರೆ ಅದು ಎಲ್ಲಿದೆಯೋ ಅಲ್ಲೇ ಬಿಟ್ಟುಬಿಡಲಿ. ಆದರೆ ಯಾವ ಸಂದರ್ಭದಲ್ಲೂ ಅದು ಹಿಂದೆ ಸರಿಯಬಾರದು.'

**ಪ್ರಸಕ್ತ ಪರಿಸ್ಥಿತಿ**

ಅಂಬೇಡ್ಕರ್‌ರವರ ಈ ನೋವಿಗೆ ಪರಿಹಾರವನ್ನು ಕಂಡುಹಿಡಿಯಬೇಕಾದ ತುರ್ತು ಈಗಿದೆ. ಇವತ್ತು ಮೊದಲಿಗಿಂತ ಸಾಮಾಜಿಕ ಪರಿಸ್ಥಿತಿ, ಜನಜೀವನ ಉತ್ತಮವಾಗಿದೆ. ದಲಿತ ಸಮುದಾಯ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿ ಹೊಂದುತ್ತಿದ್ದಾರೆ. ವಿದ್ಯಾವಂತರಾಗಿ, ಶ್ರೀಮಂತರಾಗಿ ಸಂಘಟನೆಗಳ ಮೂಲಕ ಆತ್ಮವಿಶ್ವಾಸದಿಂದ ಅನ್ಯಾಯ ವನ್ನು ಪ್ರತಿಭಟಿಸಿ ತಮ್ಮ ಹಕ್ಕೊತ್ತಾಯವನ್ನು ಮಾಡುವಷ್ಟು ಪ್ರಬಲರಾಗಿದ್ದಾರೆ. ಜಾತಿನಿಂದನೆ, ಜನಾಂಗ ದ್ವೇಷ, ಅತ್ಯಾಚಾರವೇ ಮೊದಲಾದ ಅಪರಾಧಗಳಿಗೆ ಸರಕಾರ ಜಾಮೀನುರಹಿತ ದಂಡನೆಯನ್ನು ವಿಧಿಸಿದೆ. ಪ್ರತಿಯೊಬ್ಬರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ. ಜನಾಂಗದ ಮೇಧಾವಿಗಳು, ಚಿಂತಕರು, ಸಮಾಜ ಸುಧಾರಕರು ಮಾನವೀಯ ಹಕ್ಕುಗಳಿಗಾಗಿ ಮೊದಲಿನಂತೆ ಹೋರಾಡುವ ಅಗತ್ಯವಿಲ್ಲ. ದಲಿತಜನಾಂಗದ ಧೀಮಂತ ಕವಿ ಡಾ.

ಸಿದ್ದಲಿಂಗಯ್ಯನವರು 'ಹೊಲೆಮಾದಿಗರ ಹಾಡು'ಬರೆಯುವ ಕಾಲಕ್ಕೂ 'ಸಾವಿರಾರು ನದಿಗಳು'ಬರೆಯುವ ಕಾಲಕ್ಕೂಬಹಳಷ್ಟು ಬದಲಾವಣೆಯಾಗಿದೆ.

ಆದ್ದರಿಂದ ಈಗಿರುವ ಸ್ಥಿತಿಯಲ್ಲೇ ಮೀಸಲಾತಿಯನ್ನು ಮುಂದುವರಿಸುವುದು ಅರ್ಥಹೀನ. ಶಾಲೆಯ ಮೊದಲ ಪ್ರವೇಶಾತಿಯಿಂದ ಮೊದಲ್ಗೊಂಡು ನಿವೃತ್ತನಾಗುವ ವರೆಗೆ ಮೀಸಲಾತಿಯ ಮೂಲಕ ಒಂದು ಸಮುದಾಯವನ್ನು ಮೇಲೆತ್ತುವುದೆಂದರೆ ಅದು ವ್ಯಕ್ತಿಯನ್ನು ಆಲಸಿಯನ್ನಾಗಿ, ಹೆಳವನನ್ನಾಗಿ ಮಾಡುವುದೆಂದರ್ಥ. ಅದು ವ್ಯಕ್ತಿಗೆ ಮಾತ್ರವಲ್ಲ ಇಡೀ ಸಮುದಾಯಕ್ಕೆ ಮಾಡುವ ಅವಮಾನ. ಹರಿಯುವ ದೋಣಿಗೆ ನೂಕು ಕೊಟ್ಟಂತೆ ಮುಂದೆ ಬರಬೇಕೆನ್ನುವ ಉತ್ಸಾಹೀ ಕ್ರಿಯಾಶೀಲ ವ್ಯಕ್ತಿಯನ್ನು ಉತ್ತೇಜಿಸಬೇಕು; ಯೋಗ್ಯತೆಯನ್ನು ಪುರಸ್ಕರಿಸಬೇಕು. ಜಾತಿಯ ಕಾರಣದಿಂದ ಯಾರೂ ದುರ್ಬಲರಲ್ಲ, ಅಸಮರ್ಥರಲ್ಲ. ಜೀವನದುದ್ದಕ್ಕೂ ಮೀಸಲಾತಿಯ ಮೂಲಕ ಇನ್ನೊಬ್ಬರ ಭಿಕ್ಷೆಗಾಗಿ ಕೈಚಾಚಿ ಕೂರದೆ ಆತ್ಮವಿಶ್ವಾಸವನ್ನು ರೂಢಿಸಿಕೊಂಡು ತನ್ನ ಪರಿಶ್ರಮ, ಯೋಗ್ಯತೆಗಳಿಂದ ಮುಂದೆ ಬರಬೇಕೆನ್ನುವ ಛಲ, ಬಲಗಳನ್ನು ಪ್ರತಿಯೊಬ್ಬರೂ ಆರ್ಜಿಸಿಕೊಳ್ಳಬೇಕು. ಯಾರದೋ ಔದಾರ್ಯದಿಂದ ಸಿಗುವ ಪುಕ್ಕಟೆ ಅನುಕೂಲಕ್ಕಿಂತ ನಮ್ಮ ನಮ್ಮ ಪ್ರತಿಭೆ, ಸಾಮರ್ಥ್ಯಗಳಿಂದ ಪಡೆಯುವ ಸುಖ. ಸೌಲಭ್ಯಗಳು ಮೌಲಿಕವಾಗಿರುತ್ತವೆ. ಮೀಸಲಾತಿಯಿಂದ ಗಳಿಸುವ ಅನುಕೂಲಗಳು ಆತ್ಮತೃಪ್ತಿಯನ್ನು ತರುವುದಿಲ್ಲ. ದಲಿತ ಸಮುದಾಯ ಇತರ ಸಮುದಾಯದೊಂದಿಗೆ ಸಮಾನವಾದ ಹಕ್ಕು ಬಾಧ್ಯತೆಗಳನ್ನು ಪಡೆದು ಸಮಾಜದ ಮುಖ್ಯವಾಹಿನಿಯೊಂದಿಗೆ ಸಾವಯವ ಗೊಂಡರೆ ಮೀಸಲಾತಿಯ ಅಗತ್ಯವಿಲ್ಲವೆಂಬುದನ್ನು ಸ್ವತಃ ಅಂಬೇಡ್ಕರ್ ಅವರೇ ಒಪ್ಪಿಕೊಂಡಿದ್ದರು. 'ಅಸ್ಪೃಶ್ಯರನ್ನು ಮತ್ತು ಸ್ಪೃಶ್ಯರನ್ನು ಯಾವುದೇ ಕಾಯ್ದೆ ಮಾತ್ರದಿಂದ ಬೆಸೆಯಲು ಸಾಧ್ಯವಿಲ್ಲ. ಜಂಟಿ ಮತಕ್ಷೇತ್ರಗಳನ್ನು ಜಾರಿಗೊಳಿಸಿದಾಕ್ಷಣ ಇವರಿಬ್ಬರೂ ಒಂದಾಗಿಬಿಡುತ್ತಾರೆ ಎಂಬುದು ದೊಡ್ಡ ಭ್ರಮೆ.ಇವರನ್ನು ಕಡೆಯವರೆಗೆ ಬೆಸೆಯಲು ಸಾಧ್ಯವಿರುವ ಒಂದೇ ದಾರಿ ಎಂದರೆ, ಇಬ್ಬರಲ್ಲೂ ಪರಸ್ಪರರ ಬಗ್ಗೆ ಪ್ರೀತಿ, ಗೌರವ ಮೂಡಿಸಿ, ಇಬ್ಬರಲ್ಲೂ ಸಮಾನತೆಯನ್ನು ತರುವುದೇ ಆಗಿದೆ. ಹಿಂದೂ ಸವರ್ಣೀಯರನ್ನು ಚಿಂತನೆಗೆ ಪ್ರೇರೇಪಿಸಿ ತಮ್ಮನ್ನು ತಾವು ಬದಲಿಸಿಕೊಳ್ಳಬೇಕೆಂಬ ಭಾವನೆಯನ್ನು ಅವರಲ್ಲಿ ಮೂಡಿಸಿದಾಗಲೇ ನಿಮ್ಮ ವರ್ಗಗಳಿಗೆ ವಿಮೋಚನೆ ದೊರಕುತ್ತದೆ. ಹಿಂದು ಸವರ್ಣೀಯರ ಚಿಂತನೆಯಲ್ಲಿ ಕ್ರಾಂತಿಯಾಗಬೇಕೆಂದು ನಾನು ಬಯಸುತ್ತೇನೆ.' (ಸಂಘರ್ಷ–ಪು ೨೪೫) ಎಂದು ಅಂಬೇಡ್ಕರ್ ಹೇಳುತ್ತಲೇ ಇದ್ದರು.ಈ ಬೆಸೆಯುವಿಕೆ ಅಂತರಜಾತೀಯ ಭೋಜನ ಮತ್ತು ಅಂತರಜಾತೀಯ ವಿವಾಹದಿಂದ ಸಾಧ್ಯ ಎಂಬ ಅಭಿಪ್ರಾಯವನ್ನೂ ಅವರು ವ್ಯಕ್ತಪಡಿಸುತ್ತಿದ್ದರು.

**ಮೀಸಲಾತಿಯ ಪ್ರಸ್ತುತತೆ**

ಮೀಸಲಾತಿ ಯಾವುದೇ ಜಾತಿ ಅಥವಾ ಪಂಗಡಗಳಿಗೆ ಸೀಮಿತವಾಗಬಾರ ದೆಂಬುದು ಹೊಸನಿಲುವು. ರಾಜಕೀಯದಲ್ಲಿ ಪ್ರಾತಿನಿಧ್ಯ ನೀಡುವ ಸಂದರ್ಭದಲ್ಲಿ ಎಲ್ಲ

ಜಾತಿಗಳ ಜನಗಣತಿಯನ್ನು ಮಾನದಂಡವಾಗಿ ಪರಿಗಣಿಸಿ ಅದಕ್ಕನುಗುಣವಾಗಿಯೇ ಮೀಸಲಾತಿಯನ್ನು ಬಳಸುವ ವ್ಯವಸ್ಥೆಯಾಗಬೇಕು. ಮೀಸಲಾತಿಯನ್ನೇ ನೆಚ್ಚಿ ಯಾರೂ ತಮ್ಮ ಸಾಮರ್ಥ್ಯ, ಪ್ರತಿಭೆಗಳನ್ನು ನಿರ್ಲಕ್ಷಿಸುವಂತಾಗಬಾರದು. ಔದ್ಯೋಗಿಕ ಕ್ಷೇತ್ರವನ್ನು ಗಮನಿಸಿದರೂ ಈಗ ಅನೇಕ ಎಮ್.ಎನ್.ಸಿ.ಗಳು ಪದವಿ ಹಾಗೂ ವೃತ್ತಿಶಿಕ್ಷಣದ ಕಾಲೇಜಿಗೆ ಹೋಗಿ ಕ್ಯಾಂಪಸ್ ಇಂಟರ್ವ್ಯೂ ಮೂಲಕ ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತವೆ. ಅಲ್ಲಿ ಯಾರೂ ಜಾತಿಯನ್ನು ಕೇಳುವುದಿಲ್ಲ. ಪರಿಶ್ರಮ ಮತ್ತು ಸಾಧನೆಯಿಂದ ಗಳಿಸಿದ ಅರ್ಹತೆಯ ಮೂಲಕವೇ ಅದರಲ್ಲಿ ಪ್ರವೇಶ ಪಡೆಯಲು ಸಾಧ್ಯ. ಆದ್ದರಿಂದಯೋಗ್ಯತೆಗೆ ಮಣೆಹಾಕದವರ ವಿರುದ್ಧ ಹೋರಾಡುವುದಕ್ಕೆ ಮಾತ್ರ ಮೀಸಲಾತಿ ಮೀಸಲಾಗಿರಬೇಕೆಂಬುದು ಒಪ್ಪತಕ್ಕ ವಿಚಾರವೇ. ಶೈಕ್ಷಣಿಕ ಹಾಗೂ ಉದ್ಯಮಕ್ಷೇತ್ರಗಳ ಪ್ರಸಕ್ತ ಸ್ಥಿತಿಯಲ್ಲಿ ಮೀಸಲಾತಿಯ ಚಿಂತನೆ ಮತ್ತು ಸ್ವರೂಪದಲ್ಲಿ ಮೂಲಭೂತ ಬದಲಾವಣೆಯಾಗಬೇಕು. ಮೀಸಲಾತಿಯೆಂಬುದು ಆಪತ್ಬಾಂಧವನಂತಿದ್ದರೆ ಸಾಕು.

**ಪರಿಹಾರ**

ಮೀಸಲಾತಿ ಪ್ರಕ್ರಿಯೆಯನ್ನು ತಳ್ಳಿಹಾಕುವ ಅಥವಾ ಪರಿಷ್ಕರಿಸುವ ಮುನ್ನ ಪ್ರಾಥಮಿಕ ಶಿಕ್ಷಣವನ್ನು ಸರ್ವರಿಗೂ ಕಡ್ಡಾಯಗೊಳಿಸಬೇಕು. ಶಾಲಾಪ್ರವೇಶದ ಸಂದರ್ಭದಲ್ಲಿ ಜಾತಿ, ಪಂಗಡಗಳ ತಾರತಮ್ಯವಿಲ್ಲದೆ ಎಲ್ಲರಿಗೂ ಮುಕ್ತವಾದ ಅವಕಾಶವನ್ನು ಕೊಡಬೇಕು. ಕುಟುಂಬದ ಆರ್ಥಿಕ ಸ್ಥಿತಿಗತಿಗನುಗುಣವಾಗಿ ಶುಲ್ಕವನ್ನು ನಿಗದಿಪಡಿಸಬೇಕು. ಬಡತನದ ರೇಖೆಗಿಂತ ಕಡಿಮೆ ವರಮಾನವಿರುವ ಕುಟುಂಬದ ವಿದ್ಯಾರ್ಥಿಗೆ ಉಚಿತ ವಿದ್ಯಾಭ್ಯಾಸವನ್ನು ಜಾರಿಗೊಳಿಸಬೇಕು. ವಿದ್ಯಾರ್ಥಿಯ ಪ್ರತಿಭೆ ಮತ್ತು ಆಸಕ್ತಿಗನುಗುಣವಾಗಿ ಉನ್ನತ ವಿದ್ಯಾಭ್ಯಾಸಕ್ಕೆ ಅವಕಾಶವೀಯಬೇಕು. ಎಲ್ಲ ಕ್ಷೇತ್ರಗಳಲ್ಲೂ ಉದ್ಯೋಗದ ಅವಕಾಶಗಳನ್ನು ಹೆಚ್ಚಿಸಬೇಕು. ಜಾತಿ ಆಧಾರದಿಂದ ಮೀಸಲಾತಿಯನ್ನು ಕೊಡುವ ಬದಲು ವ್ಯಕ್ತಿಯ ಅರ್ಹತೆ ಮತ್ತು ಕುಟುಂಬದ ಒಟ್ಟು ಆದಾಯದ ನಿಖರ ಮಾಹಿತಿಯನ್ನು ತೆಗೆದುಕೊಂಡು ಮೀಸಲಾತಿಯ ಪ್ರಮಾಣವನ್ನು ನಿಗದಿಸಬೇಕು. ಮೀಸಲಾತಿ ಸೌಲಭ್ಯ ಅತ್ಯಂತ ನ್ಯಾಯವಾದ ರೀತಿಯಲ್ಲಿ ಬಳಕೆಯಾಗಬೇಕು.

ಮಗು ಹೆಜ್ಜೆ ಊರಲು ಕಲಿಯುವ ತನಕ ಹಿರಿಯರ ಆಸರೆಯನ್ನು ಬೇಡುತ್ತದೆ. ಹೆಜ್ಜೆ ಬಲವಾಗಿ ಊರಲು ಸಾಧ್ಯವೆಂಬ ಆತ್ಮವಿಶ್ವಾಸ ಬಂದಮೇಲೆ ಯಾರ ನೆರವೂ ಇಲ್ಲದೆ ಸ್ವತಂತ್ರವಾಗಿ ನಡೆಯುತ್ತದೆ. ಮೀಸಲಾತಿ ಕೂಡ ಯಾವುದೇ ಲಿಂಗ, ವರ್ಗ, ವರ್ಣವೆಂದಾಗಲೀ ಜಾತಿ, ಮತ, ಅಲ್ಪಸಂಖ್ಯಾತರೆಂದಾಗಲೀ ಭೇದವಿಲ್ಲದೆ ದುರ್ಬಲರಿಗೆ, ಅನಾಥರಿಗೆ, ಬಡವರಿಗೆ, ಮಹತ್ವಾಕಾಂಕ್ಷಿಗಳಿಗೆ ಅವರವರ ಅರ್ಹ ಕ್ಷೇತ್ರದಲ್ಲಿ ಸಿಗುವ ಅವಕಾಶವಾಗಬೇಕು. ಪ್ರಸಕ್ತ ಸ್ಥಿತಿಯಲ್ಲಿ ಭಾರತದ ದುರ್ಬಲ ಜನವರ್ಗದಲ್ಲಿ ದಲಿತರೇ ಅಧಿಕವಾಗಿರುವುದರಿಂದ ಮೀಸಲಾತಿಯ ಮೂಲಕ ಅವರನ್ನು ಉದ್ಧರಿಸಿದರೆ ಅಸೂಯೆ ಪಡಬೇಕಾದ ಅಗತ್ಯವಿಲ್ಲ. ಆದರೆ ಅದರರ್ಥ ಅನರ್ಹರಿಗೆ ಅವಕಾಶ ಕೊಡಬೇಕೆಂದಲ್ಲ. ಮೀಸಲಾತಿ ಅವರನ್ನು ಅರ್ಹರಾಗುವ ದಿಸೆಯಲ್ಲಿ ಕರೆದೊಯ್ಯುವುದಕ್ಕಿರುವ

ರಹದಾರಿಯಾಗಿರಬೇಕು ಅಷ್ಟೆ ಆಗಲೇ ಅಂಬೇಡ್ಕರ್ ಕಂಡ ಕನಸು ಸಾರ್ಥಕವಾಗುವುದು; ಅವರ ಜನ್ಮದಿನವನ್ನಾಗಲೀ, ಪುಣ್ಯದಿನವನ್ನಾಗಲೀ ಆಚರಿಸುವುದು ಅರ್ಥಪೂರ್ಣ ವೆನಿಸುವುದು. ಶುದ್ಧವಾದ ಚಿಂತನೆ, ಸತತವಾದ ಪರಿಶ್ರಮಗಳು ಇದಕ್ಕೆ ದಾರಿದೀಪ.

ಒಟ್ಟಿನಲ್ಲಿ ಮೀಸಲಾತಿಯ ಸಾಧಕ ಬಾಧಕಗಳನ್ನು ಮನದಂದರೆ ಮೀಸಲಾತಿಯ ಪ್ರಕ್ರಿಯೆಯನ್ನು ಸಾರಾಸಗಟಾಗಿ ತಿರಸ್ಕರಿಸದೆ ಅಥವಾ ಪುರಸ್ಕರಿಸದೆ ಪರಿಷ್ಕೃತಗೊಳಿಸಿ ಮುಂದುವರಿಸುವುದು ಅತ್ಯಗತ್ಯ. ಮೀಸಲಾತಿಯಲ್ಲಿ ಬಹುಮುಖೀಸಂಸ್ಕೃತಿಯ ಎಲ್ಲ ಹಿಂದುಳಿದ ವರ್ಗಗಳ ಉದ್ಧಾರದ ಚಿಂತನೆಯೂ ಸೇರ್ಪಡೆಯಾಗಬೇಕು. ಹೊಟ್ಟೆ ಹಸಿದವರಿಗೆ ಊಟ ನೀಡಬೇಕೇ ಹೊರತು ಹೊಟ್ಟೆ ತುಂಬಿದವರಿಗಲ್ಲ. ಹಾಗೆಯೇ ಹಸಿದವರ ಅನ್ನವನ್ನು ಕಿತ್ತುಕೊಳ್ಳುವುದೂ ಅಕ್ಷಮ್ಯ. ಗ್ರಾಮೀಣ ಪರಿಸರದಲ್ಲಿ ಇನ್ನೂ ಜೀತಗಾರಿಕೆ ಮಾಡುತ್ತ ನಾಗರಿಕ ಹಕ್ಕುಗಳಿಂದ ವಂಚಿತರಾಗಿರುವ ತಮ್ಮವರನ್ನು ಉದ್ಧಾರಮಾಡಲು ಮೀಸಲಾತಿಯನ್ನು ಬಳಸಿಕೊಳ್ಳುವ ವಿಚಾರದಲ್ಲಿ ಪ್ರತಿಯೊಂದು ಹಿಂದುಳಿದ ಜನಾಂಗದ ನಾಯಕರುಗಳು, ಅಧಿಕಾರಿಗಳು, ಸಮಾಜಚಿಂತಕರು ಗಂಭೀರವಾಗಿ ಯೋಚಿಸಿ ಪ್ರಾಮಾಣಿಕವಾದ ಪ್ರಯತ್ನಗಳನ್ನು ಮಾಡಬೇಕು. ಮೀಸಲಾತಿ ಯೊಳಗೆ ಒಳಮೀಸಲಾತಿ, ಮಹಿಳಾಮೀಸಲಾತಿಗಳ ಸೌಲಭ್ಯವನ್ನು ಯೋಜಿಸಿಕೊಂಡು ಜನಗಣತಿಗನುಗುಣವಾಗಿ ಎಲ್ಲರಿಗೂ ಸಮಾನವಾದ ಅವಕಾಶಗಳನ್ನು ನೀಡಬೇಕು. ಸರಕಾರ ಕೆಲವು ಕೋಮುಗಳನ್ನು ಪ್ರವರ್ಗಗಳಿಂದ ಪ್ರವರ್ಗಗಳಿಗೆ ಬದಲಾಯಿಸುವ ಸಂದರ್ಭದಲ್ಲಿ ಹೊಸದಾಗಿ ಸೇರ್ಪಡೆಯಾದ ಜನವರ್ಗದ ಪ್ರಮಾಣಕ್ಕನುಗುಣವಾಗಿ ಮೀಸಲಾತಿಯನ್ನು ಹೆಚ್ಚಿಸದಿರುವುದರಿಂದ ಆಂತರಿಕ ಕಲಹಗಳಿಗೆ ಮಣೆ ಹಾಕಿದಂತಾಗುತ್ತದೆ. ಹಾಗಾಗದಂತೆ ಮುಂಜಾಗ್ರತೆ ಕೈಗೊಳ್ಳಬೇಕು. ಸಂಘ, ಸಂಸ್ಥೆಗಳು ನಿಜವಾದ ಸಾಮಾಜಿಕ ಕಾಳಜಿಯಿಂದ ಕಾರ್ಯನಿರತರಾದರೆ ಎಂಥ ಸವಾಲನ್ನಾದರೂ ಧೈರ್ಯವಾಗಿ ಮೆಟ್ಟಿನಿಲ್ಲಬಹುದು. ಆಗ ಅಂಬೇಡ್ಕರ್ ಕಂಡ ಕನಸು ಕೂಡ ನನಸಾಗಬಹುದು.

■

# ಈ ಸಂಚಿಕೆಯ ಲೇಖಕರು


* ಡಾ. ಎಂ.ಜಿ. ವಾರಿ, ಚಾಲುಕ್ಯನಗರ, ೫ನೇ ತಿರುವು, ಬಾದಾಮಿ–೫೮೭೨೦೧. ಜಿ. ಬಾಗಲಕೋಟೆ. ದೂ: ೯೮೪೪೬೬೨೪೨೯

* ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, # ೬೮/ಬಿ, ಆಶ್ರಮದ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು–೫೪೦೦೧೨. ದೂ: ೦೮೨೧–೨೫೧೨೯೦

* ಯಲ್ಲಾಪುರ ಕೃಷ್ಣ ಶರ್ಮಾ, ನಂ. ೧೦, ೮ನೇ ಮುಖ್ಯರಸ್ತೆ, ೩ನೇ ಹಂತ, ಗಿರಿನಗರ, ಬೆಂಗಳೂರು–೮೫. ದೂ. ೦೮೦–೨೬೪೨೧೬೯೭

* ಡಾ. ಎಚ್.ಎಸ್. ಅನಂತನಾರಾಯಣ, ಭಾಷಾ ಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು, ಉಸ್ಮಾನಿಯಾ ವಿ.ವಿ., ೨೦೬, 'ಬ್ರಿಗೇಡ್ ಕ್ಲಾಸಿಕ್', ಆರ್ಮುಗಂ ಸರ್ಕಲ್, ಬಸವನಗುಡಿ, ಬೆಂಗಳೂರು–೫೬೦೦೦೪. ದೂ: ೯೯೮೦೬೨೨೮೧೦

* ಎಂ.ಎನ್. ಪ್ರಭಾಕರ್, # ೪೨, ಪದ್ಮಪ್ರಭಾ, ಬ್ಲಾಕ್ ೧೭, ಬ್ಯಾಂಕ್‌ಕಾಲೋನಿ, ಶ್ರೀರಾಂಪುರ, ೨ನೆಯ ಹಂತ, ಮೈಸೂರು–೫೭೦೦೨೩. ಮೊ. ೯೮೪೫೪೯೧೫೪೫

* ಡಾ. ಕೆಳದಿ ಗುಂಡಾಜೋಯಿಸ್, ಹಿರಿಯ ಹಸ್ತಪ್ರತಿ ಶಾಸ್ತ್ರಜ್ಞರು ಮತ್ತು ಸಂಯೋಜಕರು, ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರ, ಕೆಳದಿ. ದೂ: ೯೪೪೮೮೩೯೭೩೯

* ಎಸ್. ಜಗನ್ನಾಥ, # ೨೯೨೫, ಸರಸ್ವತೀಪುರಂ, ೧ನೆಯ ಮುಖ್ಯರಸ್ತೆ, ೫ನೆಯ ಅಡ್ಡರಸ್ತೆ, ಮೈಸೂರು–೫೭೦೦೦೯.

* ಡಾ. ಆರ್. ಲಕ್ಷ್ಮೀನಾರಾಯಣ, ೧೨, ಶ್ರೀನಿಕೇತನ, ೨ನೆಯ ಕ್ರಾಸ್, ಶಿವಾನಂದ ನಗರ, ಮೂಡಲಪಾಳ್ಯ, ಬೆಂಗಳೂರು–೫೬೦೦೭೨. ದೂ: ೯೪೪೯೦೨೮೯೯೬

* ಪ್ರೊ. ಜಿ. ಅಶ್ವತ್ಥನಾರಾಯಣ, ೯೫, ೩೪ಬಿ ಕ್ರಾಸ್, ೧೬ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು–೫೬೦೦೧೧. ದೂ : ೦೮೦–೨೬೬೧೫೮೭೭

* ಡಾ. ಆರ್. ಶೇಷಶಾಸ್ತ್ರಿ, ೧೩–೧೩–೬೪೯, ಶ್ರೀನಿವಾಸನಗರ, ಅನಂತಪುರಂ–೫೧೫೦೦೧. ದೂ: ೦೯೪೪೦೪೬೬೫೯

* ಡಾ. ಜೆ. ಸದಾನಂದಂ C/o ಡಾ. ಆರ್. ಶೇಷಶಾಸ್ತ್ರಿ.

* ಎಸ್. ಕಾರ್ತಿಕ್, # ೬೫ [೧ ಮಹಡಿ], ೩ನೆಯ ಅಡ್ಡರಸ್ತೆ, ಶಿಕ್ಷಕರ ಬಡಾವಣೆ, ೧ನೆಯ ಹಂತ, ಕುಮಾರಸ್ವಾಮಿ ಬಡಾವಣೆ ಅಂಚೆ, ಬೆಂಗಳೂರು–೫೬೦೧೧೧.

* ಸಂಧ್ಯಾ ಹೆಗಡೆ, ಸಂಧ್ಯಾ ಹೆಗಡೆ ದೊಡ್ಡಹೊಂಡ, ವಂದೂರು ಅಂಚೆ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. ದೂ: ೯೪೮೧೦೩೩೮೯೪

* ಡಾ. ಪ್ರಮೀಳಾ ಮಾಧವ್, ೮೮/೮, ಶ್ರೀಸದನ, ೭ನೇ ಕ್ರಾಸ್, ವಿಟ್ಠಲನಗರ, ಇಸ್ರೋ ಲೇಔಟ್ ಹತ್ತಿರ, ಬೆಂಗಳೂರು–೧೧೧. ದೂ: ೯೮೪೫೨೧೬೧೦

# ಲಭ್ಯವಿರುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆಗಳು

೧ ಸಾಹಿತ್ಯೋಪಾಸಕರು ಮಾಲೆ-೩/ವಿವಿಧ ಲೇಖಕರು/೯೦

೨ ಪರಿಷ್ಕೃತ ಹೊಸಗನ್ನಡದ ವ್ಯಾಕರಣ/ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ/೧೨೦

೩ ವೈಚಾರಿಕ ಜಾಗೃತಿ (ಹೊಸ ಆವೃತ್ತಿ)/ಡಾ. ಜಿ. ರಾಮಕೃಷ್ಣ/೧೦೦

೪ ಕವಿಗಳು ಕಂಡ ಬಿ.ಎಂ.ಶ್ರೀ./ಹೊ.ರಾ.ಸತ್ಯನಾರಾಯಣ ರಾವ್/೮೦

೫ ಶ್ರೀ ಕೃಷ್ಣದೇವರಾಯನ ದಿನಚರಿ/ಪ್ರೊ. ಎಂ.ವಿ.ಸೀತಾರಾಮಯ್ಯ/೮೦

೬ ಕನ್ನಡ ಮಾತು ತಲೆಯೆತ್ತುವ ಬಗೆ/ಬಿ.ಎಂ.ಶ್ರೀಕಂಠಯ್ಯ/೧೦

೭ ಬೆಟಗೇರಿ ಕೃಷ್ಣಶರ್ಮ/ಎಸ್.ವಿ. ಶ್ರೀನಿವಾಸರಾವ್/೨೦

೮ ಬರಡು ಬರಹಗಳು/ಎಚ್.ವಿ.ಸಾವಿತ್ರಮ್ಮರಾಮಸ್ವಾಮಿ/೪೦

೯ ಕನ್ನಡ ನವೋದಯ ಪ್ರವರ್ತಕ ಬಿ.ಎಂ.ಶ್ರೀಕಂಠಯ್ಯ ವ್ಯಕ್ತಿಪರಿಚಯ ಮತ್ತು ಸೂಕ್ತಿಗಳು/ಪ್ರೊ. ಡಿ. ಲಿಂಗಯ್ಯ/೩೦

೧೦ ಸಿರಿಕಂಟ/ಎನ್.ಬಸವಾರಾಧ್ಯ, ನಾ.ಗೀತಾಚಾರ್ಯ/೩೫೦

೧೧ ಎಂ.ವಿ.ಸೀ ವಾಚಿಕೆ-೧ ಸೃಜನ ಸಾಹಿತ್ಯ/ಎನ್.ಎಸ್. ಶ್ರೀಧರಮೂರ್ತಿ/೧೫೦

೧೨ ಸುದ್ದಿ ಸಂಕಮ್ಮ/ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ/೫೦

೧೩ ಬಿ.ಎಂ.ಶ್ರೀಕಂಠಯ್ಯ ಜೀವನ-ಸಾಧನೆ/ನಾ. ಗೀತಾಚಾರ್ಯ/೧೦೦

೧೪ ಪರಿಹಾರ ಮತ್ತು ಇತರ ಕಥೆಗಳು/ಪ್ರೊ. ಎಂ.ವಿ. ಸೀತಾರಾಮಯ್ಯ/೩೦

೧೪ ಇಂಗ್ಲೀಷ್ ಗೀತಗಳು/ಬಿ.ಎಂ.ಶ್ರೀಕಂಠಯ್ಯ/೧೦೦

೧೬ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ/ಡಾ. ನಾ. ಗೀತಾಚಾರ್ಯ/೧೦೦

೧೭ ಕಾವ್ಯದ ಒಂದು ಚುಂಗನ್ನು ಹಿಡಿದು/ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ/೬೦

೧೮ ಆಯ್ದ ಕವನಗಳು/ಬಿ.ಎಂ. ಶ್ರೀಕಂಠಯ್ಯ/೧೦

೧೯ ಕೆಲವು ಕನ್ನಡ ನಿಘಂಟುಗಳು,ಸಮಸ್ಯೆಗಳು,ಪರಿಹಾರಗಳು/ಎಸ್. ಕಾರ್ತಿಕ್/೧೮೦

೨೦ ಧೀಮಂತ ಮಹಿಳೆ ದಿ. ನಂಜಮ್ಮ (ವ್ಯಕ್ತಿ ಪರಿಚಯ) ಶ್ರೀಮತಿ ಲಕ್ಷ್ಮೀ ಎನ್.ಮೂರ್ತಿ/೫೦

೨೧ ಪ್ರೊ. ಡಿ. ಲಿಂಗಯ್ಯ: ಜೀವನ ಮತ್ತು ಸಾಹಿತ್ಯ ಸಾಧನೆ/ವಿವಿಧ ಲೇಖಕರು/೬೦

೨೨ ಶ್ರೀ ಕೈವಾರ ರಾಜಾರಾವ್/ಜಗನ್ನಾಥ ಹೇಮಾದ್ರಿ/೫೦

೨೩ ಪ್ರಾಚೀನ ಕನ್ನಡ ಕಾವ್ಯ ಸಂಗ್ರಹ/ಡಾ. ಮುಳುಕುಂಟೆ ರಮೇಶ್/೨೦

೨೪ ಸಾರ್ಥಕ ಬದುಕಿನ ಶತಾಯುಷಿ ಪ್ರೊ. ಸೇತುರಾಮ ರಾಘವೇಂದ್ರಮಳಗಿ/ ಡಾ. ವಿಜಯಾ ಸುಬ್ಬರಾಜ್/೭೦

೨೫ ಹಸ್ತಪ್ರತಿ ಶಾಸ್ತ್ರಜ್ಞ ಎಸ್. ಶಿವಣ್ಣ/ಡಾ. ಬಿ.ಎಸ್. ಸ್ವಾಮಿ/೩೦

೨೬ ಎಂ.ವಿ.ಸೀತಾರಾಮಯ್ಯ ಜೀವನ ಮತ್ತು ಸಾಹಿತ್ಯ ಸಾಧನೆ/ಎಂ.ಎಸ್.ಭಾಸ್ಕರ್/೫೦

೨೭ ಮಕ್ಕಳ ಎಂ.ವಿ.ಸೀ/ಬೆ.ಗೋ.ರಮೇಶ್/೨೦

೨೮ ಕರ್ಣಾಟಕ ಶಬ್ದಾನುಶಾಸನಂ/ಡಾ. ಉಪ್ಪಂಗಳರಾಮಭಟ್ಟ/೪೦೦

೨೯ ಸೌಂದರ್ಯಲಹರೀ ಸ್ತೋತ್ರ ದೀಪಿಕೆ/ಪ್ರೊ. ಜಿ. ಅಶ್ವತ್ಥನಾರಾಯಣ/೪೦೦

# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

'ಕನ್ನಡದ ಕಣ್ವ' ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ಹೊಸಗನ್ನಡದ ಯುಗಪುರುಷರು; ಇಂತಹ ಆಚಾರ್ಯಪುರುಷರ ಹೆಸರಿನ ಈ ಸಂಸ್ಥೆ ಸೃಜನ ಮತ್ತು ಸಂಶೋಧನ ಎರಡೂ ಸಾಹಿತ್ಯ ಕ್ಷೇತ್ರಗಳಲ್ಲಿ ದುಡಿಯುತ್ತಿದೆ. ಒಂದು, ಪ್ರಾಚೀನ ಸಾಹಿತ್ಯದ ಪರಿಷ್ಕರಣ; ಇನ್ನೊಂದು, ಆಧುನಿಕ ಸಾಹಿತ್ಯದ ಪುರಸ್ಕರಣ. ಈ ಸಂಸ್ಥೆಯನ್ನು ೧೯೭೯ರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ್ದು, ಇದು ಯಶಸ್ವೀ ಮೂವತ್ತನಾಲ್ಕು ವರ್ಷಗಳನ್ನು ಪೂರೈಸಿ ೨೦೦೪ರಲ್ಲಿ ರಜತೋತ್ಸವವನ್ನು ಆಚರಿಸಿದೆ.

ಈಗಾಗಲೇ ಈ ಸಂಸ್ಥೆಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದೆ. ಕರ್ನಾಟಕದಲ್ಲಿ ಸಂಶೋಧನೆ ಮತ್ತು ಪಾಂಡಿತ್ಯ ಸಂವರ್ಧನೆಗಳಿಗೆ ಮೀಸಲಾದ ಪ್ರತಿಷ್ಠಿತ ಸಂಶೋಧನಾ ಕೇಂದ್ರವಾಗಿದೆ. ಈವರೆಗೆ ಸುಮಾರು ೧೮೫ ಗ್ರಂಥಗಳನ್ನು ಹೊರತಂದಿದೆ. ಸಂಶೋಧನ ಕಾರ್ಯಕ್ಕೆ ಅನುಕೂಲವಾಗುವಂತೆ ಹದಿನೈದು ಸಾವಿರಕ್ಕೂ ಅಧಿಕ ಅಮೂಲ್ಯ ಗ್ರಂಥಗಳ ಆಕರಗ್ರಂಥಾಲಯವನ್ನೂ ಸುಮಾರು ಒಂದು ಸಾವಿರಕ್ಕೂ ಅಧಿಕ ಪ್ರಾಚೀನ ಓಲೆಗರಿ ಗ್ರಂಥಗಳ ಹಸ್ತಪ್ರತಿ ಭಂಡಾರವನ್ನೂ ಹೊಂದಿರುವ ಪ್ರತಿಷ್ಠಾನ, ಸದಸ್ಯರು, ಉದಾರ ದಾನಿಗಳು ಮತ್ತು ಅಭಿಮಾನಿಗಳಿಂದಲೇ ಬೆಳೆಯುತ್ತಿದೆ.

## ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರವಾಗಿರುವ ಪ್ರತಿಷ್ಠಾನದಲ್ಲಿ ಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ ಅನೇಕರು ಪಿಎಚ್.ಡಿ. ಪದವಿ ಮತ್ತು ಎಂ.ಫಿಲ್. ಪದವಿ ಪಡೆದಿರುತ್ತಾರೆ. ನುರಿತ ಮಾರ್ಗದರ್ಶಕರ ಸಹಕಾರದಿಂದ ಈ ಅಧ್ಯಯನ ಕೇಂದ್ರವನ್ನು ನಡೆಸಲಾಗುತ್ತಿದೆ.

## ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನ ಮಾನ್ಯತೆಯ ಕೇಂದ್ರ

ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನಿಂದ ಮಾನ್ಯತೆ ಪಡೆದಿರುವ ಪ್ರತಿಷ್ಠಾನವು ರಾಷ್ಟ್ರದ ಪ್ರತಿಷ್ಠಿತ ಹಸ್ತಪ್ರತಿ ಅಧ್ಯಯನ ಕೇಂದ್ರವಾಗಿದ್ದು ಅಮೂಲ್ಯ ಓಲೆಗರಿ ಗ್ರಂಥಗಳು, ಕಾಗದಪತ್ರಗಳು, ನಮ್ಮ ತಲೆಮಾರಿನ ಸಾಹಿತಿ-ಗಣ್ಯರ ಪತ್ರಗಳು ಮತ್ತು ಹಸ್ತಪ್ರತಿಗಳನ್ನು ಸಂರಕ್ಷಿಸುತ್ತ ನಾಡಿನ ಆಸ್ತಿಯನ್ನು ಉಳಿಸಲು ಶ್ರಮಿಸುತ್ತಿರುವ ಸೇವಾಸಂಸ್ಥೆಯಾಗಿದೆ.

## ಬಿ.ಎಂ.ಶ್ರೀ. ಕಲಾಭವನ

ಮೂರು ಮಹಡಿಗಳ ಭವ್ಯ ಬಿ.ಎಂ.ಶ್ರೀ. ಕಲಾಭವನವನ್ನು ಸಂಸದರ ನಿಧಿ ಮತ್ತು ದಾನಿಗಳ ನೆರವಿನಿಂದ ಕಟ್ಟಲಾಗಿದೆ. 'ಎಂ.ವಿ.ಸೀ. ಸಭಾಂಗಣ', ಗ್ರಂಥಾಲಯ, ವಸ್ತು-ಹಸ್ತಪ್ರತಿ ಸಂಗ್ರಹಾಲಯ, ಉಪನ್ಯಾಸ ಕೊಠಡಿಗಳು ನಿರ್ಮಾಣವಾಗಿವೆ.

## ಚಟುವಟಿಕೆಗಳು

'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆ ಹಾಗೂ 'ಹೊಂಗನಸು' ವಾರ್ತಾಪತ್ರದ ಪ್ರಕಟಣೆ, ಸಹೃದಯ ಗೋಷ್ಠಿಯ ಆಯೋಜನೆ, ಹಸ್ತಪ್ರತಿ ಶಾಸ್ತ್ರ ಮತ್ತು ಹಸ್ತಪ್ರತಿ ಅಧ್ಯಯನ ತರಗತಿಗಳು, ಹಸ್ತಪ್ರತಿ ಸಮಾವೇಶ, 'ಸಿರಿಕಂಟ' ವಿದ್ಯಾರ್ಥಿಗೋಷ್ಠಿ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ ಮೊದಲಾದುವು ಪ್ರತಿಷ್ಠಾನದ ಮುಖ್ಯ ಚಟುವಟಿಕೆಗಳಾಗಿವೆ.